ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೫೩ ಜೂನ್ ೨೦೧೭ ಸಂಚಿಕೆ : ೦೬



ಕರ್ನಾಟಕ ಸರ್ಕಾರ ವತಿಯಿಂದ ನೀಡಲಾದ 'ಶ್ರೀ ಭಗವಾನ್ ಮಹಾವೀರ ಶಾಂತಿ ಪ್ರಶಸ್ತಿ'ಯನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಶ್ರೀಮಠದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ಉಮಾಶ್ರೀ ಮೊದಲಾದವರು ಉಪಸ್ಥಿತರಿದ್ದರು



ಜ್ಞಾನಪ್ರಕಾಶ ಸ್ಪರ್ಧಾತ್ಮಕ ಪರೀಕ್ಷೆಗಳ ತರಬೇತಿ ಸಂಸ್ಥೆಯ ಪ್ರಾರಂಭೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ನೆರವೇರಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಶ್ರೀ ಬಿ.ಎಸ್. ಯಡಿಯೂರಪ್ಪ, ಶ್ರೀ ಬಿ.ಎಸ್. ಪರಮಶಿವಯ್ಯನವರು ಉಪಸ್ಥಿತರಿದ್ದರು.



ಪೂಜ್ಯ ಶ್ರೀ ಶ್ರೀ ಮುಮ್ಮಡಿ
ಮಹಾಲಿಂಗ ಸ್ವಾಮಿಗಳವರು
(೧೫-೫-೧೯೭೩-೨೧-೫-೨೦೧೭)









ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**

ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**

ಪತ್ರಿಕಾ ನಿರ್ವಹಣಾ ಸಮಿತಿ :
**ಎಂ. ರೇಣುಕಾರಾಧ್ಯ**
**ಆರ್.ಎಸ್. ಮಲ್ಲೇಶಪ್ಪ**
**ಕೆ.ಬಿ. ಶಿವಶಂಕರಯ್ಯ**
**ಸಿ. ಕುಮಾರಸ್ವಾಮಿ**

ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು :
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು-572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104
ದೂ: 0816-2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**




**ಸಂಪುಟ : ೫೩ ಜೂನ್ ೨೦೧೮ ಸಂಚಿಕೆ : ೦೬**

## ಒಳಪುಟಗಳಲ್ಲಿ .................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ಪೂಜ್ಯರ ಆರೋಗ್ಯಕ್ಕಾಗಿ ಪ್ರಾರ್ಥಿಸಿದ ಭಕ್ತರು

ಭಕ್ತ ಜಗತ್ತು ತಲ್ಲಣಿಸಿತು. ಭಯದ ಭಾವದಿಂದ ನಡನಡುಗಿತು. ಶ್ರೀಮಠದ ಪ್ರಾಣಜೀವಾಳವಾದ ಪರಮಪೂಜ್ಯ ಪದ್ಮಭೂಷಣ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅನಾರೋಗ್ಯ ಉಲ್ಬಣಿಸಿ ಬೆಂಗಳೂರಿನ ಬಿ.ಜಿ.ಎಸ್. ಆಸ್ಪತ್ರೆಗೆ ದಾಖಲಾಗಿ, ನುರಿತ, ಅನುಭವೀ, ಮಾನವೀಯತೆಯ ವೈದ್ಯಬಂಧುಗಳ ಕಟ್ಟೆಚ್ಚರದಲ್ಲಿ ಆರೈಕೆಗೊಳ್ಳುವ ಕ್ಷಣಗಳಲ್ಲಿ ಶ್ರೀಮಠದ ಕಾಯಕ ದಾಸೋಹ ಸೂರ್ಯನಿಗೆ ಮುಸುಕಿದ್ದ ಮೋಡಗಳು ಸರಿದಾಗ ಭಕ್ತರುಗಳು ನಿಟ್ಟುಸಿರು ಬಿಟ್ಟರು. ಶ್ರೀಮಠಕ್ಕೆ ಪೂಜ್ಯ ಶ್ರೀಗಳವರನ್ನು ಕರೆತರುವ ವೇಳೆಗೆ ಸಾವಿರ ಸಾವಿರ ಸಂಖ್ಯೆಯಲ್ಲಿ ಭಕ್ತರು, ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಅಭಿಮಾನಿಗಳು, ವಿವಿಧ ಮಠಾಧೀಶರು, ಮಹಿಳೆಯರು, ಮಕ್ಕಳು ಶ್ರೀಮಠಕ್ಕೆ ಓಡೋಡಿ ಬಂದರು. ಹಳೆಯ ಮಠದಲ್ಲಿ ಸುರಕ್ಷಿತ ಕೋಣೆಯಲ್ಲಿ ಶ್ರೀಗಳವರನ್ನು ಮಲಗಿಸಲಾಯಿತು. ಶ್ರೀಗಳ ದರ್ಶನವನ್ನು ಕೋಣೆಯೊಳಗೆ ಪ್ರವೇಶಿಸದಂತೆ, ಹೊರಗಿನಿಂದಲೇ ನೋಡುವ ವ್ಯವಸ್ಥೆ ಮಾಡಲಾಯಿತು. ರಾಜ್ಯದ ಪತ್ರಿಕೆಗಳು, ದೂರದರ್ಶನಗಳಲ್ಲಿ ಸ್ವಾಮಿಗಳವರ ಆರೋಗ್ಯದ ವಿಚಾರವನ್ನು ಬಿತ್ತರಿಸಿದವು. ಪ್ರಧಾನಮಂತ್ರಿಗಳಾದ ಸನ್ಮಾನ್ಯ ಶ್ರೀ ನರೇಂದ್ರ ಮೋದಿಯವರು ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಗೆ ದೂರವಾಣಿ ಮೂಲಕ ಸಂಪರ್ಕಿಸಿ ಶ್ರೀಗಳವರ ಆರೋಗ್ಯ ವಿಚಾರಿಸಿಕೊಂಡರಲ್ಲದೆ, ಶ್ರೀಮಠಕ್ಕೆ ಬಂದು ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನ ಪಡೆಯುವುದಾಗಿ ನುಡಿದರು.

೧೧೦ ವರ್ಷಗಳ ಸೇವಾಪಥದಲ್ಲಿ ಮುನ್ನಡೆದಿರುವ ಪರಮಪೂಜ್ಯ ಶ್ರೀಶ್ರೀಗಳವರ ಉತ್ತರಾಧಿಕಾರಿಗಳಾಗಿರುವ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಇಂಥ ಸಂದರ್ಭದಲ್ಲಿ ತೋರಿದ ಧೈರ್ಯ, ಭಕ್ತರಿಗೆ ಸಾಂತ್ವನ ಮಾಡಿದ ರೀತಿ ಸಮಾಧಾನಕರವಾದವು. ಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ಆಶೀರ್ವಾದ, ಬಸವಾದಿ ಶರಣರ ಆಶೀರ್ವಾದ ಪರಮಪೂಜ್ಯರನ್ನು ಆರೋಗ್ಯವಂತರನ್ನಾಗಿ ಸಂರಕ್ಷಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು







# ವೀರಶೈವ ಮಠಾಧಿಪತಿಗಳು – ವೀರಶೈವ ಧರ್ಮ

ವೀರಶೈವ ಮಠಾಧಿಪತಿಗಳು ಕೇವಲ ಆತ್ಮಕಲ್ಯಾಣದಲ್ಲಿ ನಿರತರಾದವರಲ್ಲ. ಲೋಕಕಲ್ಯಾಣಕ್ಕಾಗಿ ದುಡಿದ ಶಿವಯೋಗಿಗಳು. ಕಾಯಕ ದಾಸೋಹವನ್ನೇ ಲಿಂಗಪೂಜೆಯೆಂದು ನಂಬಿ ನಡೆದವರು. 'ಕಾಯಕವೆ ಶಿವಪೂಜೆ, ಕಾಯಕವೆ ಶಿವಯೋಗ, ಕಾಯಕವೇ ಕೈಲಾಸ' ಎಂದು ಬಾಳಿದವರು. ಸಂನ್ಯಾಸವನ್ನು ನಿಷ್ಕ್ರಿಯವೆಂದು ಭಾವಿಸದೆ ಇಹವನ್ನೇ ಪರವನ್ನಾಗಿ ಪರಿವರ್ತಿಸುವ ಶಿವಪಥಗಾಮಿಗಳು. ಲೋಕಸಂಗ್ರಹ ಅವರ ದೃಷ್ಟಿಯಲ್ಲಿ ಮಾಯೆಯೆನಿಸಲಿಲ್ಲ. ಪರಮನನ್ನು ಕಾಣುವ ಮಾಧ್ಯಮವಾಯಿತು. ವೀರಶೈವ ಧರ್ಮ 'ಅನ್ಯರಿಗೆ ಅಸಹ್ಯಪಡದ' ರೀತಿಯಲ್ಲಿ ಪ್ರೀತಿ ಪ್ರೇಮ ಪೂರ್ಣದೃಷ್ಟಿಯಿಂದ ಯಾರನ್ನೂ, ಯಾವುದನ್ನೂ, ಭಾಷೆ, ವರ್ಣ, ವರ್ಗ, ಲಿಂಗ, ವಯದ ಭೇದವಿಲ್ಲದೆ ಅಪ್ಪಿಕೊಂಡದ್ದು, ವೀರಶೈವ ಮಠಾಧೀಶರು ಜನಸಾಮಾನ್ಯರ ದೀನದಲಿತರ ಉದ್ಧಾರಕ್ಕಾಗಿ ಶ್ರಮಿಸಿದ ಪುಣ್ಯಾತ್ಮರು.

ವೀರಶೈವ ಧರ್ಮ ಪ್ರಸಾರದಲ್ಲಿ ಗುರುಮಠಗಳು, ವಿರಕ್ತಮಠಗಳು, ಭಿಕ್ಷದ ಮಠಗಳು ಜನರ ಉದ್ಧಾರಕ್ಕಾಗಿ ಸದಾಕಾಲ ಚಿಂತಿಸಿದವು. ಕ್ರಿಯಾಶೀಲನಾಗಿ ಸೇವೆಗೈದಂಥವು.

ಮಠಗಳು ಅಹಂಕಾರ, ಮಮಕಾರ ಭಾವಗಳಿಂದ ಮುಕ್ತವಾದವುಗಳು. ಮಾನವೀಯತೆಯನ್ನು ಸಂರಕ್ಷಿಸಿಕೊಂಡ ಮಂಗಳ ಧಾಮಗಳು. ಸಮಾಜದ ಸರ್ವೋನ್ನತಿಗೆ, ಲೋಕಕಲ್ಯಾಣಕ್ಕೆ ತಮ್ಮನ್ನು ಅರ್ಪಿಸಿಕೊಂಡಂಥವುಗಳು.

ಮಠಾಧಿಪತಿಗಳು ಚಾರಿತ್ರ್ಯಶುದ್ಧರಾಗಿ, ಮಾನವೀಯ ಗುಣಗಳ ರತ್ನಗಣಿಯಾಗುವುದು ಮುಖ್ಯ.

* * *

ಮಠಗಳು ಸಮಾಜದ ಸೇವೆಗಾಗಿ ರೂಪಿತವಾದ ಸಂಸ್ಥೆಗಳು. ಜನಕಲ್ಯಾಣವೇ ಮಠದ ಗುರಿ. ಆ ಧ್ಯೇಯ ಸಾಧನೆಗಾಗಿಯೇ ಮಠದ ಸ್ವಾಮಿಗಳಾಗುವವರು ನಿರಂತರ ಕ್ರಿಯಾಶೀಲರಾಗಬೇಕು. ಧಾರ್ಮಿಕ ಶ್ರದ್ಧೆಯನ್ನು ಜನಮನದಲ್ಲಿ ಬಿತ್ತುವ ಕೈಂಕರ್ಯಯದಲ್ಲಿ ತಮ್ಮನ್ನು ಅರ್ಪಿಸಿಕೊಳ್ಳುವ ಮನಸ್ಸು ಅವರಲ್ಲಿ ಗಟ್ಟಿಗೊಳ್ಳುತ್ತಾ ಹೋಗಬೇಕು. ಮಠಾಧಿಪತಿಗಳು ವಿದ್ಯಾವಂತರಾಗುವುದು, ವಿಚಾರ ಶೀಲರಾಗುವುದು ಸಮಾಜದ ಆಗು-ಹೋಗುಗಳಿಗೆ ಸ್ಪಂದಿಸುವುದು ಅಪೇಕ್ಷಣೀಯ. ಲೋಕಸಂಗ್ರಹದ ಜೊತೆಯಲ್ಲಿಯೇ ಆತ್ಮಜ್ಞಾನ ಸಂಪನ್ನರಾಗುವುದು ಅತ್ಯಂತ ಅಗತ್ಯವಾದುದು. ಆತ್ಮಜ್ಞಾನವೇ ಆತ್ಮಸಾಕ್ಷಾತ್ಕಾರವೇ ಧರ್ಮ ಎಂಬ ಗಾಂಧೀಜಿಯವರ ನುಡಿಯನ್ನು ಮನನ ಮಾಡಿದಷ್ಟೂ ಒಳ್ಳೆಯದು.

## ಶ್ರೀ ಸಿದ್ಧಲಿಂಗೇಶ್ವರ ವಚನ



***ಅಹಂಕಾರಭಾವ ಅವಿದ್ಯಾಭಾವ ಜ್ಞಾನಾಜ್ಞಾನುಭಾವ***
***ಜ್ಞಾನ ವಿಕೃತಿ ಭಾವ ವರ್ತನ ವಿಕೃತಿ ಭಾವ***
***ಮೋಹನ ವಿಕೃತಿ ಭಾವ ಎಂಬ ಭ್ರಾಂತು ಭಾವವ ಮಾಣಿಸಯ್ಯಾ***
***ಇಂದ್ರಿಯ ಭಾವ ವಿಷಯಭಾವ ಭೂತ ಭಾವ***
***ಕರಣ ಭಾವ ವಿಶ್ವತೈ ಜಸ ಪ್ರಾಜ್ಞನೆಂಬ ಜೀವಭಾವದ***
***ಭ್ರಮೆಯ ಕಳೆಯಯ್ಯಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ***

ಅಹಂಕಾರ ಭಾವ – ನಾಹಂ ನಾಹಂ ಎಂಬ ಮೂಲಹಂಕಾರ ಭಾವವು, ಅವಿದ್ಯಾಭಾವ ಮಾಯಾ ಪ್ರಪಂಚಿನ ಭಾವವು, ಜ್ಞಾನಾಜ್ಞಾನಭಾವ – ಅರುಹು ಮರೆವೆ ಭಾವವು, ಜ್ಞಾನವಿಕೃತಿಭಾವ – ನಿತ್ಯಾನಿತ್ಯ ವಿವೇಕವನರಿದ ಜ್ಞಾನವೆಲ್ಲಾ ವಿಕರಿಸಿ ಕೆಟ್ಟು, ಅಜ್ಞಾನಕ್ಕೊಳಗಾದಂಥ ಭಾವವು, ವರ್ತನ ವಿಕೃತಿಭಾವ – ಸತ್ಯ ಸದಾಚಾರ ಸನ್ಮಾರ್ಗವೆಲ್ಲ ವಿಕರಿಸಿ ಕೆಟ್ಟು ದುರ್ವರ್ತನೆಗೊಳಗಾದಂಥ ಭಾವವು – ಮೋಹನ ವಿಕೃತಿ ಭಾವ – ಮೋಕ್ಷಾಪೇಕ್ಷೆಯ ಮೇಲಣ ಸಮ್ಮೋಹನವೆಲ್ಲಿ ವಿಕರಿಸಿಕೆಟ್ಟು ದುರ್ಮೋಹಕ್ಕೊಳಗಾದಂಥ ಭಾವವು, ಎಂಬ ಹೀನೆಂಬ ಭ್ರಾಂತು – ಭ್ರಮಣೆಯು, ಭಾವವ – ಭಿನ್ನಭಾವವನು, ಮಾಣಿಸಯ್ಯಾ – ಬಿಡಿಸಯ್ಯಾ, ಇಂದ್ರಿಯ ಭಾವ – ಪಂಚೇಂದ್ರಿಯಂಗಳ ವರ್ತನೆಯು, ವಿಷಯ ಭಾವವ – ಪಂಚ ವಿಷಯಗಳ ವರ್ತನೆಯು, ಭೂತಭಾವ ಪಂಚ ಭೂತಂಗಳ ವರ್ತನೆಯು, ಕರಣಭಾವ. ಪಂಚಕರಣಗಳ ವರ್ತನೆಯೋ, ವಿಶ್ವ – ಜೀವನು, ತೈಜಸ – ತೈಜಸ ಜೀವನು, ಪ್ರಾಜ್ಞ – ಪ್ರಾಜ್ಞಜೀವನು, ಎಂಬಿ – ಹೀಗೆಂಬ, ಜೀವಭಾವ ಭಾವಭ್ರಮಣೆ ಕಳೆಯಯ್ಯಾ – ವಿಶ್ವ ತೈಜಸ ಪ್ರಾಜ್ಞರೆಂಬ ಜೀವಭಾವ ಭ್ರಾಂತನು ನಷ್ಟವ ಮಾಡಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

*(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ|| ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)*

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಾಡಿದನೆಂಬುದೆ ಮಹಾಪಾಪವೆಂದೊರೆದೆ
ನೀಡಿದನೆಂಬುದೆ ಘನನರಕ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಡಿ ದೂರಾಗದಿರು ಮಾಡಿ ದೂರಾಗದಿರು
ಬಾಗಿ ಕೈಮುಗಿದು ಬಾಳೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಯ ಕಲಿಸಿದ ತಂದೆ ನಡೆಯ ಕಲಿಸಿದೆ ತಂದೆ
ರೀತಿ ರಿವಾಜುಗಳ ಕಲಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುಕ್ತಿಯ ಲಾಂಛನವೆ ಮುಕ್ತಿಯ ಶ್ರೀರೂಪೆ
ಭಕ್ತಿಯ ಲಾಂಛನದ ಶಿವರೂಪೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಣ್ಣ ಬಸವಣ್ಣನ ಅಕ್ಕ ಮಹಾದೇವಿಯ
ಅಪ್ಪಾ ಅಲ್ಲಮಪ್ರಭು ಗುರುವರನ । ನೆನೆಯುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸ್ವಾನುಭಾವದ ಧರೆಯ ಸ್ವಾತ್ಮ ಜ್ಞಾನದ ಕಡಲೆ
ಸ್ವಾನುಭಾವದ ಶಿವಬಾನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೌನ ಹಿಮಾಲಯ ಶಾಂತಶಿವಸಾಗರ
ನೀಲ ನಿರಾಕಾರ ಶಿವಗಡನ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತರುವಿನೊಳು ತುಂಬಿರುವೆ ಲತೆಯೊಳಗೆ ನಗುತಿರುವೆ
ನಳನಳಿಪ ಪೈರಿನೊಳು ನಲಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಕ್ಕಳ ಮುಕ್ಕಣ್ಣ ನೆನಿಸಿರುವೆ ಶಿವಗುರುವೆ
ಅಕ್ಕರೆಯ ಸಕ್ಕರೆಯಾಗಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಕ್ಷರಲೋಕಕೆ ಲಕ್ಷದೀಪವನಿಟ್ಟೆ
ಶಿಕ್ಷಿತ ಕುಸುಮಗಳ ಮುಡಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ಪರಮಪೂಜ್ಯ ಶ್ರೀ ಶ್ರೀಗಳವರಿಗೆ
# ಶ್ರೀ ಭಗವಾನ್ ಮಹಾವೀರ ಶಾಂತಿ ಪ್ರಶಸ್ತಿ ಪ್ರದಾನ





ಕರ್ನಾಟಕ ಸರ್ಕಾರ ಪ್ರಸಕ್ತ ಸಾಲಿನಿಂದ ಶ್ರೀ ಭಗವಾನ್ ಮಹಾವೀರ ಜಯಂತಿಯ ಶುಭ ಸಂದರ್ಭದಲ್ಲಿ **'ಶ್ರೀ ಭಗವಾನ್ ಮಹಾವೀರ ಶಾಂತಿ ಪ್ರಶಸ್ತಿ'**ಯನ್ನು ನೀಡಲು ತೀರ್ಮಾನಿಸಿದ್ದು, ಮೊದಲ ಪ್ರಶಸ್ತಿಯನ್ನು ತ್ರಿವಿಧ ದಾಸೋಹದ ಮೂಲಕ ಶ್ರೀ ಸಿದ್ಧಗಂಗಾ ಮಠದ ಕೀರ್ತಿಯನ್ನು ವಿಶ್ವಮಟ್ಟದಲ್ಲಿ ಪಸರಿಸುವಂತೆ ಮಾಡಿದ ಕಾಯಕಯೋಗಿಗಳೂ, ಮಹಾತಪಸ್ವಿಗಳೂ, ಮಹಾಮಾನವತಾವಾದಿಗಳೂ ಆದ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲಕ್ಷಾಂತರ ಗ್ರಾಮೀಣ ಪ್ರದೇಶದ ದೀನ–ದಲಿತರ, ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರಲ್ಲಿನ ಅರಿವಿನ ದಿಗಂತವನ್ನು ವಿಸ್ತರಿಸಿ, ಭವ್ಯ ಭವಿಷ್ಯವನ್ನು ರೂಪಿಸಿಕೊಂಡು ಸ್ವಾಭಿಮಾನಿಗಳಾಗಿ, ಉತ್ತಮ ನಾಗರಿಕರಾಗಿ ನೆಮ್ಮದಿ ಜೀವನ ನಡೆಸುವಂತೆ ಮಾಡುತ್ತಿದ್ದಾರೆ.

ಕರ್ನಾಟಕ ಸರ್ಕಾರ ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಕಲ್ಯಾಣಕ್ಕಾಗಿ ಮಾಡಿದ ಅನುಪಮ ಸೇವೆಯನ್ನು ಮನಗೊಂಡು ಈಗಾಗಲೇ **'ಕರ್ನಾಟಕ ರತ್ನ', 'ಬಸವ ರಾಷ್ಟ್ರೀಯ ಪುರಸ್ಕಾರ'** ಪ್ರಶಸ್ತಿಗಳನ್ನು ನೀಡಿ ಗೌರವಿಸುವುದರ ಮೂಲಕ ಕೃತಜ್ಞತೆಯನ್ನು ಸಲ್ಲಿಸಿದೆ. ಸನ್ಮಾನ, ಪ್ರಶಸ್ತಿಗಳಿಂದ ಬಹುದೂರವಿರುವ ಪೂಜ್ಯ ಶ್ರೀ ಶ್ರೀಗಳವರು ಸರ್ಕಾರ, ಭಕ್ತರು ಹಾಗೂ ಅಭಿಮಾನಿಗಳ ಒತ್ತಾಯದಿಂದ ಅನಿವಾರ್ಯವಾಗಿ ಒಲ್ಲದ ಮನಸ್ಸಿನಿಂದ ಪ್ರಶಸ್ತಿಯನ್ನು ಸ್ವೀಕರಿಸಿದರು. ಇದರಿಂದ ಪ್ರಶಸ್ತಿಗಳ ಮೌಲ್ಯ ಹೆಚ್ಚಾಯಿತು. ಪರಮಪೂಜ್ಯ ಶ್ರೀಗಳವರು ಸಹಜವಾದ ವಯೋಧರ್ಮದಿಂದ ಬೆಂಗಳೂರಿಗೆ ಹೋಗಿ ಪ್ರಶಸ್ತಿ ಸ್ವೀಕರಿಸಲು ಸಾಧ್ಯವಾಗದೇ ಇದ್ದುದರಿಂದ ಸರ್ಕಾರವೇ ಶ್ರೀಮಠಕ್ಕೆ ಆಗಮಿಸಿ ಪ್ರಶಸ್ತಿ, ಗೌರವ ನೀಡಿ ಧನ್ಯತೆಯನ್ನು ಪಡೆಯಿತು.

'ಕರ್ನಾಟಕ ರತ್ನ' ಪ್ರಶಸ್ತಿಯನ್ನು ಹೊರತುಪಡಿಸಿ ಬಸವ ರಾಷ್ಟ್ರೀಯ ಪ್ರಶಸ್ತಿ, ಕೇಂದ್ರ ಸರ್ಕಾರ ಕೊಡಮಾಡಿದ 'ಪದ್ಮಭೂಷಣ' ಪ್ರಶಸ್ತಿ, ಬೆಂಗಳೂರು ವಿಶ್ವವಿದ್ಯಾಲಯ ನೀಡಿದ ಗೌರವ ಡಾಕ್ಟರೇಟ್ ಪ್ರಶಸ್ತಿಗಳನ್ನು ಶ್ರೀಮಠಕ್ಕೆ ಬಂದು ಅರ್ಪಿಸಲಾಯಿತು.

ಏಪ್ರಿಲ್ ೧೭ ರಂದು ಶ್ರೀಮಠದಲ್ಲಿ ಭವ್ಯವಾದ ವೇದಿಕೆಯಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರು ಪರಮಪೂಜ್ಯ ಶ್ರೀ ಶ್ರೀಗಳವರಿಗೆ **'ಶ್ರೀ ಭಗವಾನ್ ಮಹಾವೀರ ಶಾಂತಿ ಪ್ರಶಸ್ತಿ'**ಯನ್ನು ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ಉಮಾಶ್ರೀ ಅವರು ಉಪಸ್ಥಿತರಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ತುಮಕೂರು ಜಿಲ್ಲಾ ಆಡಳಿತದ ನೆರವಿನಿಂದ ಸಮಾರಂಭವನ್ನು ವ್ಯವಸ್ಥಿತವಾಗಿ ಏರ್ಪಡಿಸಲಾಗಿತ್ತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆದ ಈ ಸಮಾರಂಭದಲ್ಲಿ ಸಚಿವರು, ಲೋಕಸಭಾ ಸದಸ್ಯರು, ಶಾಸಕರು, ಜಿಲ್ಲಾ ಪಂಚಾಯಿತ್ ಅಧ್ಯಕ್ಷರು, ಸದಸ್ಯರು, ತುಮಕೂರು ಮಹಾನಗರ ಪಾಲಿಕೆಯ ಮಹಾಪೌರರು, ಜಿಲ್ಲಾಧಿಕಾರಿಗಳು ಸೇರಿದಂತೆ ಗಣ್ಯರು ಭಾಗವಹಿಸಿ ಕಾರ್ಯಕ್ರಮವನ್ನು ಚೆಂದಗೊಳಿಸಿದರು.

# ಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ

ಶತಮಾನ ಕಾಲದಿಂದ ಸಿದ್ಧಗಂಗೆಯ ಪರಿಸರದಲ್ಲಿ ಹತ್ತಾರು ಸಾವಿರ ಜನರಿಗೆ ಅಕ್ಕರೆಯಿಂದ ಜಾತಿ, ಮತ, ಪಂಥಗಳ ಹಂಗಿಲ್ಲದೆ, ಅಕ್ಷರ, ವಸತಿ ಮತ್ತು ಅನ್ನದಾಸೋಹ ನಡೆಯಿಸುತ್ತಿರುವ ತ್ರಿವಿಧ ದಾಸೋಹಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಸಿದ್ಧಗಂಗೆ ಶ್ರೀಗಳೆಂದೇ ಲೋಕಪ್ರಸಿದ್ಧರು.

ಶ್ರೀ ಶಿವಕುಮಾರ ಸ್ವಾಮಿಗಳು ಮಾಗಡಿಗೆ ಹತ್ತಿರವೇ ಇರುವ ವೀರಾಪುರ ಎಂಬ ಪುಟ್ಟ ಗ್ರಾಮದಲ್ಲಿ ೧೯೦೮ ಏಪ್ರಿಲ್ ೧ರಂದು ಜನಿಸಿದರು. ಪಟೇಲ್ ಹೊನ್ನಪ್ಪ ಮತ್ತು ಗಂಗಮ್ಮ ಅವರ ಸುಪುತ್ರರಾಗಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ವೀರಾಪುರ ಮತ್ತು ನಾಗವಲ್ಲಿ ಎಂಬ ಗ್ರಾಮದಲ್ಲಿ ಮುಗಿಸಿ ನಂತರ ಸೆಕೆಂಡರಿ ವಿದ್ಯಾಭ್ಯಾಸವನ್ನು ತುಮಕೂರಿನ ಸರ್ಕಾರಿ ಪ್ರೌಢಶಾಲೆಯಲ್ಲಿ ಮುಗಿಸಿದರು. ನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಪದವೀಧರರಾದರು. ನಂತರದ್ದು ಸಿದ್ಧಗಂಗೆಯ ಪೀಠದ ಜವಾಬ್ದಾರಿ.

ತುಮಕೂರು ಸಮೀಪದ ಕ್ಯಾತಸಂದ್ರದಲ್ಲಿ 'ಸಿದ್ಧಗಂಗಾ ಮಠ' ಪ್ರಸಿದ್ಧ ಧಾರ್ಮಿಕ ಮತ್ತು ಶಿಕ್ಷಣ ಹಾಗೂ ಅನ್ನದಾಸೋಹ ಕ್ಷೇತ್ರ ಎಂದು ಪ್ರಸಿದ್ಧಿ ಪಡೆದಿದೆ. ಗೋಸಲ ಸಿದ್ಧೇಶ್ವರರು ಶ್ರೀಮಠದ ಸ್ಥಾಪಕರು, ಮೊದಲು ಸಿದ್ಧಲಿಂಗ ಸ್ವಾಮಿಗಳಿಂದ ಪ್ರಾರಂಭಗೊಂಡ ದಾಸೋಹ ಕಾರ್ಯ, ಅಟವಿ ಸ್ವಾಮಿಗಳಿಂದ ವಿದ್ಯಾರ್ಜನೆಗಾಗಿ ಸಂಸ್ಕೃತ ಪಾಠಶಾಲೆಗಳ ಆರಂಭ, ನಂತರ ಉದ್ಧಾನ ಶಿವಯೋಗಿಗಳ ಕಾಲದಲ್ಲಿ ಶಿವರಾತ್ರಿ ಹಬ್ಬದ ಸಮಯದಲ್ಲಿ ಸಿದ್ಧಗಂಗೆ ಜಾತ್ರೆ ಆರಂಭಿಸಿ ಬಂದು ಹೋಗುವ ಭಕ್ತಾದಿಗಳಿಗೆ ವಸತಿ, ಊಟದ ವ್ಯವಸ್ಥೆ ನೀಡುವ ಯೋಜನೆ ಪ್ರಾರಂಭಿಸಿದರು. ಇಂತಹ ಪರಂಪರೆಯನ್ನು ಅಷ್ಟೇ ಪರಿಣಾಮಕಾರಿಯಾಗಿ ನಡೆಯಿಸಿಕೊಂಡು ಬಂದಿರುವವರು ಸಿದ್ಧಗಂಗೆ ಪ್ರಸ್ತುತ ಪೀಠಾಧೀಶರಾದ ನೂರ ಹತ್ತು ವಯಸ್ಸಿನ ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು.

ಇಂದಿಗೂ ಶ್ರೀಮಠದ ಆವರಣದಲ್ಲಿ ಕಾಯಕ ನಡೆಯಿಸುವ ಶಿವಕುಮಾರ ಸ್ವಾಮಿಗಳು, ಕಾಯಕ ಮತ್ತು ಸಹಬಾಳ್ವೆಯ ಮಹತ್ವವನ್ನು ತಮ್ಮ ಮಾತು ಕೃತಿಗಳಲ್ಲಿ ಪಸರಿಸುತ್ತ ಬಂದಿದ್ದಾರೆ. ಸುಮಾರು ೧೦,೦೦೦ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಲಿದ್ದಾರೆ. ಸುಮಾರು ೧೨೮ ವಿದ್ಯಾ ಸಂಸ್ಥೆಗಳನ್ನೊಳಗೊಂಡಿದೆ. ಈ ಸಂಸ್ಥೆಗಳು ನರ್ಸರಿಯಿಂದ ಹಿಡಿದು ತಾಂತ್ರಿಕ ವಿದ್ಯಾಲಯದವರೆಗೂ ಹಲವು ಹಂತಗಳ ಮೌಲಿಕ ಶಿಕ್ಷಣವನ್ನು ಅತ್ಯಂತ ಪರಿಣಾಮಕಾರಿಯಾಗಿ ಮೌಲ್ಯಗಳ ಶಿಕ್ಷಣದ ಜೊತೆ ಜೊತೆಗೆ ನೀಡುತ್ತ ಬಂದಿದ್ದಾರೆ.

ಶ್ರೀಗಳು ಸಿದ್ಧಗಂಗೆಯಲ್ಲಿ ಪೀಠಾಧೀಶರಾಗಿ ಜವಾಬ್ದಾರಿ ವಹಿಸಿಕೊಂಡಾಗ ಶ್ರೀಮಠವು ಆರ್ಥಿಕವಾಗಿ ಅತ್ಯಂತ ಕಠಿಣ ದಿನಗಳನ್ನು ಎದುರಿಸುತ್ತಿತ್ತು. ಮಠದ ಶಾಲೆಗಳ ವಿದ್ಯಾರ್ಥಿಗಳು ಮತ್ತು ಭಕ್ತಾದಿಗಳ ಅನ್ನದಾಸೋಹಕ್ಕಾಗಿ ಶ್ರೀಗಳೇ ಲೋಕಸಂಚಾರ ಮಾಡಿ ನಿರಂತರ ದಾಸೋಹಕ್ಕೆ ಕೊರತೆ ಆಗದಂತೆ ಭಕ್ತರ ಮನೆಗಳಿಂದ ದವಸ-ಧಾನ್ಯ ಪಡೆದು ನಡೆಯಿಸಿದ್ದಾರೆ. ಮಠದ ಧಾರ್ಮಿಕ ಚಟುವಟಿಕೆಗಳು, ಸಂಸ್ಥೆಯ ಆರ್ಥಿಕ ನಿರ್ವಹಣೆ, ಮಠಕ್ಕೆ ಆಗಮಿಸುವ ಭಕ್ತಾದಿಗಳು, ಆಶ್ರಿತರು, ಗಣ್ಯರನ್ನೆಲ್ಲ ನಿರಂತರವಾಗಿ ಅವಿಶ್ರಾಂತವಾಗಿ ನಿರ್ವಹಿಸುವ ಶ್ರೀಗಳು ಮೌಲ್ಯಯುತ ಶಿಕ್ಷಣದ ಜೊತೆ ಜೊತೆಗೆ ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ಹೆಸರು ಮಾಡಿರುವ ಹಲವು ಸಾಧಕರಿಗೆ ಸಿದ್ಧಗಂಗೆಯ ಶಿಕ್ಷಣ ಸಂಸ್ಥೆಗಳು ನೆಲೆಯೂ ಪ್ರೋತ್ಸಾಹದ ಆಸರೆಯೂ ಆಗಿವೆ.

ಸ್ವಾಮೀಜಿಯವರ ಸಮಾಜ ಮತ್ತು ಶಿಕ್ಷಣ ಸೇವೆಯನ್ನು ಪರಿಗಣಿಸಿ ಕರ್ನಾಟಕ ವಿಶ್ವವಿದ್ಯಾಲಯವು ಶ್ರೀಗಳಿಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಿದೆ. ಸ್ವಾಮೀಜಿಯವರ ೧೦೦ನೇ ಹುಟ್ಟುಹಬ್ಬ ಮತ್ತು ಕರ್ನಾಟಕ ಸುವರ್ಣ ಮಹೋತ್ಸವ ಸಮಯದಲ್ಲಿ ಶ್ರೀಗಳ ಜೀವಮಾನ ಸಮಾಜ ಸೇವೆಯನ್ನು ಪರಿಗಣಿಸಿ ರಾಜ್ಯದ ಮಹೋನ್ನತ ನಾಗರಿಕ ಪ್ರಶಸ್ತಿಯಾದ 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ಶ್ರೀಗಳಿಗೆ ನೀಡಿ ಗೌರವಿಸಿದೆ. ಬಸವ ತತ್ವ ಚಿಂತನೆಗಳ ಅನುಷ್ಠಾನ ಮತ್ತು ಪ್ರಸಾರಕ್ಕಾಗಿ ಸಲ್ಲಿಸಿರುವ ಸೇವೆಯನ್ನು ಗುರುತ್ತಿಸಿ ಬಸವ ರಾಷ್ಟ್ರೀಯ ಪುರಸ್ಕಾರವನ್ನು ನೀಡಿ ಗೌರವಿಸಲಾಗಿದೆ. ಭಾರತ ಸರ್ಕಾರವು ೨೦೧೫ರಲ್ಲಿ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಚಕ್ರವರ್ತಿ ಮೋಹನ್**, ಭಾ.ಆ.ಸೇ.
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಕೆ.ಎ. ದಯಾನಂದ**, ಕೆ.ಆ.ಸೇ.
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ







# ಕ್ರಿಯಾಯೋಗ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ನಿಮ್ಮ ಸುತ್ತಮುತ್ತೆಲ್ಲಾ ಅನಂತವಾಗಿ ಹರಡಿದ ಈ ಜಗತ್ತು ಅತ್ಯಂತ ಸಂಕೀರ್ಣ. ಇದನ್ನು ತಿಳಿದುಕೊಳ್ಳಲು ಸಾಕಷ್ಟು ಪ್ರಯತ್ನ ಮಾಡುತ್ತಿದ್ದೇವೆ. ಕಣ್ಣು, ಬುದ್ಧಿ ಮುಂತಾದ ಸಮರ್ಥ ಸಾಧನಗಳನ್ನು ಬಳಸುತ್ತ ಇದ್ದೇವೆ. ಆದರೂ ಈ ಸಂಕೀರ್ಣತೆಯನ್ನು ಸಂಪೂರ್ಣ ಅರಿತುಕೊಳ್ಳಲಾಗಿಲ್ಲ. ನಾವು ಯೋಜಿಸಿದಷ್ಟೂ ಗಹನತೆ ಹೆಚ್ಚುತ್ತಿದೆ. ತೋರಿಕೆಯಲ್ಲಿ ಎಲ್ಲವೂ ಸ್ಪಷ್ಟವಾಗಿರುವಂತೆ ಭಾಸವಾಗುತ್ತದೆ. ಆದ್ದರಿಂದಲೇ ಈ ಜಗತ್ತಿನ ಈ ರೂಪವನ್ನು ಕಂಡು ಕೆಲ ಸಂತರು ಇದನ್ನು **'ಮಾಯಿಕ'** ಎಂದು ಕರೆದರು. ಅಂದರೆ ಜಗತ್ತು ಅಸತ್ಯವಾಗಿದೆ ಎಂದಲ್ಲ. ಈ ಜಗತ್ತು ಹೀಗೆಯೇ ಇದೆ ಎಂದು ಖಚಿತವಾಗಿ ಹೇಳಬರದು ಎಂದರ್ಥ.

ನ್ಯೂಟನ್ ಗಿಡದ ಕೆಳಗೆ ಕುಳಿತಿದ್ದ. ಮೇಲಿನಿಂದ ಭೂಮಿಗೆ ಒಂದು ಕಾಯಿ ಬಿತ್ತು. ಆಗ ನ್ಯೂಟನ್ ಪ್ರಶ್ನೆಮಾಡಿದ, 'ಕೆಳಗೆ ಯಾಕೆ ಬಿತ್ತು?' ಸಾವಿರಾರು ವರುಷಗಳಿಂದ ಕಾಯಿಗಳು ಬಿದ್ದೇ ಬಿದ್ದಿವೆ. ಯಾರೂ ಆ ಪ್ರಶ್ನೆಯನ್ನು ಮಾಡಿಲ್ಲ. ಏಕೆಂದರೆ ಹಾಗೆ ಬೀಳುವುದು ಸಹಜ ಸಾಮಾನ್ಯ ಎನಿಸಿತ್ತು. ಸಾವಿರಾರು ವರ್ಷಗಳಿಂದ ಬುದ್ಧಿವಂತರು ಇರಲಿಲ್ಲವೇನು? ಇದ್ದರು. ಬಹಳ ದೊಡ್ಡ ದೊಡ್ಡ ವಿದ್ವಾಂಸರು, ಘನ ಪಂಡಿತರು, ಚಿಂತಕರು ಇದ್ದರು. ಆದರೂ ಗೊತ್ತಾಗಲಿಲ್ಲ. ನ್ಯೂಟನ್ ಒಬ್ಬ ಸಾಮಾನ್ಯ ಯುವಕ. ಆಕಸ್ಮಿಕವಾಗಿ ನಡೆದ ಘಟನೆ ಚಿಂತನೆಗೆ ತೊಡಗಿಸಿತು.

Why it should fall to the ground?

Why it should not fly away into the sky?

ಕೆಳಗೆಯೇ ಏಕೆ ಬೀಳಬೇಕು? ಮೇಲೆ ಏಕೆ ಏರಬಾರದು? ಉತ್ತರಿಸುವ ಪ್ರಯತ್ನಮಾಡಿದ ಜೀವನದ ತುಂಬಾ. ವಿಶ್ವದ ಒಂದು ರಹಸ್ಯ ಗೊತ್ತಾಯಿತು! ದ್ರವ್ಯರಾಶಿಯ ಸುತ್ತಮುತ್ತೆಲ್ಲಾ ಒಂದು ಆಕರ್ಷಣಾ ವಲಯ ಹರಡಿರುತ್ತದೆ ಎಂಬ, ನಮಗೆ ಮೊದಲು ಗೊತ್ತಿಲ್ಲದ, ರಹಸ್ಯ ಹೊಳೆಯಿತು! ನಮಗಾರಿಗೂ ಕಾಣದ್ದು ಅವನಿಗೆ ಗೋಚರಿಸಿತು. ಆತನ ಶೋಧ ನಮಗೆ ತೃಪ್ತಿ ನೀಡಿತು. ಅನಂತರ ಆ ವಿಷಯದಲ್ಲಿ ನಮಗೆಲ್ಲ ತಿಳಿದಿದೆ ಎನ್ನುವ ಹಾಗೆಯೇ ವರ್ತಿಸುತ್ತಿದ್ದೇವೆ. ನ್ಯೂಟನ್ ಹೇಳಿದ ಗುರುತ್ವಾಕರ್ಷಣೆ ಶಕ್ತಿಯ ಬಗೆಗೆ ನಾವು ಬೇಕಾದಷ್ಟು ಪ್ರಶ್ನೆ ಕೇಳಬಹುದು. ಕೇಳಿಲ್ಲ ಅಷ್ಟೇ. ಎಂತಲೇ ನಮಗೆ ಎಲ್ಲವೂ ಸ್ಪಷ್ಟವಾಗಿರುವಂತೆ ಭಾಸವಾಗುತ್ತದೆ. ಪ್ರಶ್ನೆ ಕೇಳುತ್ತ ಸಾಗಿದರೆ ಎಲ್ಲವೂ ಅಸ್ಪಷ್ಟ ಕ್ಲಿಷ್ಟವೆನಿಸುತ್ತದೆ! ಜಗತ್ತು ಏನಿದೆ ಎಂಬುದನ್ನು ಸಂಪೂರ್ಣ ಹೇಳಲಾಗದು. ಆದ್ದರಿಂದ ಇದು ಮಾಯೆ.

ಈ ಮನುಷ್ಯ ಒಳ್ಳೆಯವ, ಈ ಮನುಷ್ಯ ಕೆಟ್ಟವ ಎಂದು ಸುಲಭವಾಗಿ ನಿರ್ಣಯಿಸುತ್ತೇವೆ, ಹಿಂದೆ ಮುಂದೆ ಯೋಚಿಸದೆ. ಮಾತಿನ ಸತ್ಯಾಸತ್ಯದ ಶೋಧವನ್ನು ಮಾಡದೆ ನಿರ್ಣಯದ ಮಾತನಾಡುತ್ತೇವೆ. ನಿಜವಾಗಿ ಪರೀಕ್ಷಿಸ ಹೊರಟರೆ ನಮ್ಮ ನಿರ್ಣಯ ನಿಲ್ಲದು. ವ್ಯಕ್ತಿಯ ಬಹಿರಂಗ ಅಂತರಂಗಗಳನ್ನು ಸಂಪೂರ್ಣ ನೋಡಲಾಗದು ಎಂದಾಗ ನಮ್ಮ ಅಭಿಪ್ರಾಯ ಹೇಗೆ ಸತ್ಯವಾದೀತು? ವ್ಯಕ್ತಿ ಸಮಾಜಗಳ ಬಗೆಗೆ ನಾವು ಮೇಲೆ ತಿಳಿದಿರುತ್ತೇವೆಯೇ ವಿನಃ ಅಂತರಂಗವನ್ನಲ್ಲ. ಜಗತ್ತು ಅತ್ಯಂತ ಸಂಕೀರ್ಣ. ಚಿಕ್ಕ ವಸ್ತುವೂ ಕೂಡ ರಹಸ್ಯವೇ. ಬಿಡಿಸಿ, ನಮಗೆ ತಿಳಿಯದ ನೂರಾರು ಸಂಗತಿಗಳು. ನಮಗೆ ಕಂಡುದುದು ಅಲ್ಪ, ಕಾಣದ್ದು ಸಾಗರ!

ವಿಶ್ವ ಬರೀ ಸಂಕೀರ್ಣ ಅಲ್ಲ, ಪರಿಸಂಕೀರ್ಣ! ಅತ್ಯಂತ ಸಂಕೀರ್ಣ! ಎಲ್ಲವೂ ರಹಸ್ಯ; ಅದ್ಭುತ! ೧೦೦ ಕಿಲೋ ವಸ್ತುವನ್ನು ಹೆಗಲಮೇಲೆ ಹೊತ್ತುಕೊಂಡು ನಾಲ್ಕು ಹೆಜ್ಜೆ ಹೋಗಬೇಕಾದರೆ ಎಷ್ಟು ಕಷ್ಟ! ಆಕಾಶದೊಳಗೆ ಪ್ರಚಂಡ ಭಾರದ ಕಾಯಗಳು ಮತ್ತು ಸೂರ್ಯರು. ತೇಲುತ್ತಿವೆ! ಉರುಳುತ್ತಿವೆ! ಅಚ್ಚರಿ! ಯಾರಿಗೂ ಪೂರ್ಣ ಗೊತ್ತಾಗದಂತಿದೆ ಈ ಜಗತ್ತು! ಇಂತಹ ಜಗತ್ತನ್ನು ತಿಳಿದಿದ್ದೇವೆ ಎನ್ನಬಾರದು, ತಿಳಿದಿಲ್ಲ ಎಂದೂ ಹೇಳಬಾರದು! ಅಲ್ಪಸ್ವಲ್ಪ ತಿಳಿದಿದೆ; ತಿಳಿದಿಲ್ಲ. ಕಂಡಿದೆ, ಕಂಡಿಲ್ಲ. ಇಂತಹ ಅದ್ಭುತ ವಿಶ್ವ ಇದು! ಆದರೂ ಸಮಸ್ತ ವಿಶ್ವದ ಗುರಿಯೇ ಮನುಷ್ಯನ ಬದುಕು! ಎಂಬ ಭ್ರಮೆಗೆ ಒಳಗಾಗಿದ್ದೇವೆ! ನಾವು ಕೇಂದ್ರ. ಜಗತ್ತು ನಮ್ಮ ಸುತ್ತ ತಿರುಗುತ್ತಿದೆ! ಎಂಥ 'ಅಹಂ'ತೆ! ಎಲ್ಲವೂ ನಮಗಾಗಿ! ಸೂರ್ಯ ಚಂದ್ರ, ಗಾಳಿ ಆಕಾಶ ಎಲ್ಲವೂ! ಈ ಭ್ರಮೆಯ ಮಾನವ ತನ್ನ ಹಿರಿಮೆಗಾಗಿ ಹೋರಾಡುತ್ತಾನೆ. ಈ ಜಗತ್ತಿನ ವಸ್ತುವಿನ ರಚನೆಯತ್ತ ಲಕ್ಷ್ಯ ಇಲ್ಲ. ನನ್ನ ಕಡೆ ನಿಮ್ಮ ಲಕ್ಷ್ಯ, ನಿಮ್ಮ ಕಡೆ ನನ್ನ ಲಕ್ಷ್ಯ. ಆದರೆ ವಿಶ್ವದ ಕಡೆ ಲಕ್ಷ್ಯ ಇಲ್ಲ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ರೇಡಿಯಂ ಕಂಡುಹಿಡಿದರು ಮದಾಂ ಕ್ಯೂರಿ. ಅದು ಅದ್ಭುತವಾದ ಸಂಶೋಧನೆ. ಪಾರಿತೋಷಕ ಸಿಕ್ಕಿತು, ನೊಬೆಲ್. ಆದರೆ ಮದಾಂ ಕ್ಯೂರಿಯವರು ಆ ಪಾರಿತೋಷಕ ಪಡೆದ ನಂತರ ಲೋಕದ ಎದುರು ಅದನ್ನು ಪ್ರದರ್ಶಿಸಲಿಲ್ಲ. ಒಂದು ಹಳ್ಳಿಯ ಮನೆಗೆ ಹೋಗಿ ವಾಸಮಾಡಿಕೊಂಡಿದ್ದರು. ಅಲ್ಲಿಗೆ ಪತ್ರಿಕೆಯವರೊಬ್ಬರು ಅವರ ಸಂದೇಶಕ್ಕಾಗಿ ಹೋದರು. ನೊಬೆಲ್ ಪಾರಿತೋಷಕ ಪಡೆದ ವಿಜ್ಞಾನಿ ಹೆಣ್ಣುಮಗಳು ಕೈಯೊಳಗೆ ಗುದ್ದಲಿ ಹಿಡಿದು ಕೆಲಸಮಾಡುತ್ತಿದ್ದಳು. ಸಾದಾ ಬಟ್ಟೆ, ಮಾಸಿತ್ತು. ಧೂಳು ಬಿದ್ದಿತ್ತು. ಸಣ್ಣ ಪುಟ್ಟ ಪದವಿ ಪ್ರಶಸ್ತಿ ಸಿಕ್ಕರೇ ಊರ ತುಂಬ ಪ್ರದರ್ಶಿಸುವ ನಾವೆಲ್ಲಿ? ಕ್ಯೂರಿ ಎಲ್ಲಿ? ಪತ್ರಿಕೆಯವ ಆಕೆಯ ಸಾಧನೆಯನ್ನು ಪ್ರಶಂಸಿಸಿ, ಆ ಸಂದರ್ಭದಲ್ಲಿ ಒಂದು ಸಂದೇಶ ಕೊಡಿ ಜಗತ್ತಿಗೆ ಎಂದ. *'ವ್ಯಕ್ತಿಗಳಿಗಿಂತ ವಿಶ್ವದ ಸಂಗತಿಗಳಲ್ಲಿ ಹೆಚ್ಚು ಆಸಕ್ತಿ ತಾಳಿ'* ಎಂದು ಆದೇಶವಿತ್ತಳು! *"ನಾನು ದೊಡ್ಡವಳಲ್ಲ. ಜಗತ್ತು ದೊಡ್ಡದು. ನಾನಿಲ್ಲದಿದ್ದರೂ ಇನ್ನೊಬ್ಬರು ಸಂಶೋಧಿಸುತ್ತಾರೆ. ನನ್ನನ್ನು ಉಪೇಕ್ಷಿಸಿರಿ. ಜಗತ್ತನ್ನು ತಿಳಿವ ಆಸಕ್ತಿ ತೋರಿರಿ."* ಇದು ಆಕೆಯ ಆಶಯ.

'ಸಾವು' ಭೂಮಿಕೆಯನ್ನು ಸಿದಗೊಳಿಸುತ್ತದೆ. ಅದರಲ್ಲಿ ಜೀವನವು ಮೊಳೆಯುತ್ತದೆ. ಕಸದ ಕುಪ್ಪೆ, ಕಸದ ರಾಶಿ ಅದು. ಇಂತಹ ಕಸದ ರಾಶಿಯೊಳಗಿಂದ ಒಂದು ಲತೆ ಮೇಲೆ ಬರುತ್ತದೆ, ಜೀವ ಚಿಮ್ಮುತ್ತದೆ. ಸತ್ತ ವಸ್ತುವಿನ ಮಧ್ಯದಿಂದ ಜೀವ ಚಿಮ್ಮುತ್ತದೆ! ಬೀಜ ಸಾಯುತ್ತದೆ. ಬೀಜದ ಸಾವಿನ ಅಂತರಂಗದಿಂದ ಒಂದು ವಿಶಾಲ ವೃಕ್ಷ ಹೊರಹೊಮ್ಮುತ್ತದೆ. ಇದು ವಿಶ್ವದ ಚಮತ್ಕಾರ. ಜೀವ ವಿಕಾಸ ! ಸಾವಿನಿಂದ ಬದುಕು. ಬದುಕಿನಲ್ಲೆಲ್ಲ ಸಾವು ! ಎರಡೂ ಪೂರಕ, ಪರಸ್ಪರ. ಬದುಕಿಲ್ಲದ ಸಾವಿಗಾಗಲಿ, ಸಾವೇ ಇಲ್ಲದ ಬದುಕಿಗಾಗಲಿ ಈ ವಿಶ್ವ ಸ್ತರದಲ್ಲಿ ಅರ್ಥವಿಲ್ಲ. ಅದನ್ನು ಕಲ್ಪಿಸಲೂ ಆಗದು. ನಾನು ಸಾಯಲಿಲ್ಲ; ನೀವು ಸಾಯಲಿಲ್ಲ; ಯಾರೂ ಸಾಯಲಿಲ್ಲ ಎನ್ನಿ. ಹೂ ಸಾಯಲಿಲ್ಲ. ಹಣ್ಣು ಸಾಯಲಿಲ್ಲ. ಸಸ್ಯ ಸಾಯಲಿಲ್ಲ, ಪ್ರಾಣಿಗಳೂ ಸರಿ. ಯಾವುದೂ ಸಾಯದೆ ಇದ್ದರೆ ಆಹಾರ ಆಗುವುದು ಯಾವುದು? ಬದುಕುವುದು ಯಾವುದರ ಮೇಲೆ? ಒಂದು ಉಂಟಾಗಬೇಕಾದರೆ ಇನ್ನೊಂದು ಹೋಗಬೇಕಾಗುತ್ತದೆ. ಅಜ್ಜ ಹೋಗುತ್ತಾನೆ; ಮೊಮ್ಮಗ ಬರುತ್ತಾನೆ ಮನೆಯೊಳಗೆ. ಅಜ್ಜನ ಹೋಗುವಿಕೆ, ಮಗುವಿನ ಬರುವಿಕೆ ಹೊಂದಿಕೊಂಡಿವೆ.

ಎಲ್ಲಾ ಹಿಂದಿನವರೂ ಹೋಗಿದ್ದಾರೆ ಎಂದೇ ನಮಗಿಲ್ಲಿ ವಾಸಿಸಲು, ಬದುಕಲು ಅವಕಾಶ. ಬಂದವರೆಲ್ಲ ಇದ್ದಿದ್ದರೆ, ನಾವು ಇರುವುದಾದರೂ ಎಲ್ಲಿ? ಹೇಗೆ? ನಿಮ್ಮ ಪುಟ್ಟ ಮನೆಯೊಳಗೆ ನೀವು, ನಿಮ್ಮ ಹೆಂಡತಿ, ನಿಮ್ಮ ಇಬ್ಬರು ಮಕ್ಕಳು, ಚಂದದ ಜೀವನ ! ಹಾಗಾಗದೆ, ತಂದೆ ತಾಯಿಗಳು, ಅಜ್ಜ ಮುತ್ತಜ್ಜರು, ಅಜ್ಜಿ ಮುತ್ತಜ್ಜಿಗಳು ಎಲ್ಲರೂ ಇದ್ದಿದ್ದರೆ? ಸಾವಿನಿಂದ ಜೀವ. ದುಃಖದಿಂದ ಸುಖ ಹೊರಹೊಮ್ಮುತ್ತೆ. ಜಗತ್ತೇ ಅದ್ಭುತ. ಅದು ಸದಾ ರಹಸ್ಯ. ಅದರ ಪರಿಜ್ಞಾನವಿಲ್ಲದುದರಿಂದ ಹಾಗಿರಬೇಕು, ಹೀಗಿರಬೇಕು ಎಂಬ ಕಲ್ಪನೆ ನಮ್ಮದು. ಒಂದು ವೇಳೆ ಈ ರಹಸ್ಯದ ತಿಳಿವಾದರೆ ಎಲ್ಲವೂ ಸರಿ, ಎಲ್ಲವೂ ಅವಶ್ಯ ಎನಿಸುತ್ತದೆ. ಸುಖವೂ ಸರಿ. ದುಃಖವೂ ಸರಿ. ತಲೆನೋವು ಇರದೇ ಇದ್ದರೆ ನಾವು ಬದುಕುತ್ತಿರಲಿಲ್ಲ ! ಹೊಟ್ಟೆ ಕಡಿಯದೇ ಇದ್ದರೆ ನಾವು ಬದುಕುತ್ತಿರಲಿಲ್ಲ. ಹೊಟ್ಟೆ ಕಡಿಯುತ್ತದೆ ಎಂದೇ ಏನೋ ಕೆಟ್ಟಿದೆ ಎಂದು ಗೊತ್ತಾಗುತ್ತದೆ. ದೇಹದ ಸಂಕೇತ ಅದು. ಅದು ದೇಹದ ಭಾಷೆ. ಎಲ್ಲರಿಗೂ ತಿಳಿವ ಭಾಷೆ ಅದು. 'ನಾನು ಸರಿಯಿಲ್ಲ' ಎಂದು ಅದು ಹೇಳುತ್ತದೆ. ಹಾಗೆ ಅದು ಹೇಳದೇ ಇದ್ದಿದ್ದರೆ, ದೇಹದಲ್ಲಿ ಏನಾಗಿದೆ ನಮ್ಮ ಗಮನಕ್ಕೆ ಬರುತ್ತಿರಲಿಲ್ಲ. ಆಗ ಕಷ್ಟ ಪರಂಪರೆಗೆ ಸಿಲುಕಿಕೊಳ್ಳುತ್ತಿದ್ದೆವು. ಬೆಂಕಿಯ ಸುಡುವಿಕೆ, ಹಸಿವಿನ ಬಾಧೆ, ಗಾಯದ ನೋವು ಗೊತ್ತಾಗುವುದರಿಂದಲೇ ಬದುಕು ಸುರಕ್ಷಿತವಾಗಿರಲು ಸಾಧ್ಯವಾಗಿದೆ. ಸೃಷ್ಟಿ ಜಾಣ. ಏನು ಏನು ಬಾಳಿಗೆ ಅವಶ್ಯ ಅದೆಲ್ಲ ರೂಪುಗೊಂಡಿದೆ. ಮೊದಲು ಜಡವಸ್ತು. ಅದರಲ್ಲಿ ನೂರು ನೂರು ವಿಧದ ರಚನೆಗಳು. ಅದರ ಮಧ್ಯದಿಂದ ಜೀವಸ್ಪಂದನ! ಅದು ಕೋಟ್ಯಂತರ ವರುಷ ಬೆಳೆದು ಮಾನವನಾದ ! ವಿಕಾಸ ! ಮಾನವೀಯ ಮತಿಯ ಬೆರಗುಗೊಳಿಸುವ ಚಮತ್ಕಾರ ! ಇದು ದೇಹ ವಿಕಾಸ. ಅದೇ ರೀತಿ ಮನೋವಿಕಾಸ. ಈ ಮನೋವಿಕಾಸ ಪೂರ್ಣ ಗೊಂಡಾಗ ದೇವದರ್ಶನ ! ಆತ್ಮಾನುಭವ. ಅಸತ್ಯ, ಅಜ್ಞಾನಗಳಿಗೆ ಆಸ್ಪದವಿತ್ತ ಮನಸ್ಸು ಸಾಮಾನ್ಯ. ಅದು ವಿಷಯಗಳ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತದೆ. ಅದೇ ಮನಸ್ಸು ತಿಳಿಯಾಗಿ, ಜ್ಞಾನ-ಬೆಳಗಿನಲಿ ಸ್ನಾತವಾದರೆ ಸತ್ಯ ಪ್ರೇಮಗಳು ಅದನ್ನು ಪ್ರವೇಶಿಸುತ್ತವೆ. ಮನದ ಭಾವದಳಗಳು ಬಿಚ್ಚಿಕೊಳ್ಳುತ್ತವೆ. ಅರಳುತ್ತದೆ, ಚಿತ್ತು ! ಆಗ ದೇವ ಭಾನ ! ಭಗವತ್ ದರ್ಶನ ! ಹೀಗೆ ಅರಳಲು ಜನ್ಮ ಜನ್ಮಗಳೇ ಬೇಕೆಂದೇನೂ ನೇಮವಿಲ್ಲ. ಇದೇ ಬದುಕಿನಲ್ಲಿ ಸಾಧ್ಯ. ವಾಲ್ಮೀಕಿ, ನಾಮದೇವ, ಉರಿಲಿಂಗ ಪೆದ್ದಿ ಮುಂತಾದವರು ನಿದರ್ಶನ. ಮೂರನೆಯ ವರ್ಗದ ಬುದಿ ಮತ್ತೆಯುಳ್ಳ ಗಾಂಧಿ, ಬಾಲತನದಲ್ಲಿ ವ್ಯಸನಗಳ ದಾರಿ ತುಳಿದ ಗಾಂಧಿ, ಕೆಲವೇ ದಶಕಗಳಲ್ಲಿ ಮಹಾತ್ಮರಾಗಿದ್ದರು ! ಅಷ್ಟು ತೀವ್ರ ಮನಸ್ಸು ವಿಕಾಸಗೊಂಡಿತ್ತು; ಸತ್ಯದ ಅಪೂರ್ವ ಅನುಭೂತಿ ಸಮನಿಸಿತ್ತು.

ತಪಸ್ಸು ಸ್ವಾಧ್ಯಾಯ ಈಶ್ವರಪ್ರಣಿಧಾನಗಳಿಂದ ಎಂತಹ ಮನಸ್ಸಾದರೂ ವಿಕಸನಗೊಳ್ಳುತ್ತದೆ. ಪತಂಜಲರ ಮಾತಿದು. ಮನಸ್ಸು ವಿಕಾಸಗೊಳ್ಳಲು ತಪ ಮಾಡಬೇಕು. ಕಷ್ಟ ಪಡಬೇಕು; ಕಷ್ಟ ಸಹಿಸಬೇಕು. ಕಷ್ಟಗಳು ಬರುತ್ತವೆ. ಜನರಿಂದ ಆತಂಕಗಳು





ಉಂಟಾಗುತ್ತವೆ. ಬೇಡಾದ ಶಬ್ದಗಳು ಕೇಳಿ ಬರುತ್ತವೆ. ಇಷ್ಟೆಲ್ಲದರಲ್ಲಿ ಮನಸ್ಸನ್ನು ತಣ್ಣಗೆ ಇಟ್ಟುಕೊಳ್ಳುವ ಪ್ರಯತ್ನ ಮಾಡುವುದು ತಪಸ್ಸು. ಮನಸ್ಸು ತಪ್ತವಾಗುತ್ತಿದ್ದರೆ ಅದು ತಪಸ್ಸಲ್ಲ. ತಾಪ ಆಗುವ ವಾತಾವರಣದೊಳಗೆ ತಾಪ ಆಗದಂತೆ ಇದ್ದರೆ ಅದೇ ತಪಸ್ಸು. ಬಯ್ಯಬೇಕಾದ, ಹೊಡೆಯಬೇಕಾದ ಪ್ರಸಂಗದಲ್ಲೂ ಬಯ್ಯದಂತೆ, ಹೊಡೆಯದಂತೆ ಇರುವುದಾದರೆ ಅದು ತಪಸ್ಸು. ನಡತೆ, ಮಾತು, ವಿಚಾರ, ಭಾವಗಳಲ್ಲಿ ತಾಳ್ಮೆ, ಸಹನೆ. ಅದು ಪೂರ್ಣ ತಪಸ್ಸು.

ಸಹನಶೀಲತೆ ತಪಸ್ಸಿನ ಒಂದು ರೂಪವಾದರೆ 'ಅಭೀಪ್ಸೆ' ಎನ್ನುವುದು ಅದರ ಇನ್ನೊಂದು ಅತಿ ಮಹತ್ವದ ರೂಪ. ಅದು ಹೃದಯದ ಆದಮ್ಯ ಬಯಕೆ. ಆ ಬಯಕೆ ಹೆಚ್ಚಾದಾಗ ಉಂಟಾಗುವ ಆಂತರಿಕ 'ಕಾವು' ತಪ !

ನೆಪೋಲಿನ್ ಇನ್ನೂ ಬಾಲಕ. ಮಿಲಿಟರಿ ಶಿಕ್ಷಣ ಪಡೆಯುತ್ತಾ ಇದ್ದ. ಆ ದೇಶದ ಸೇನಾಧಿಪತಿ ಬಂದರು. ವಿದ್ಯಾರ್ಥಿಗಳು ಸಾಲಾಗಿ ನಿಂತಿದ್ದಾರೆ. ಪ್ರತಿಯೊಬ್ಬರಿಗೂ 'ಏನು ಆಗಬಯಸುತ್ತೀ' ಎಂದು ಕೇಳುತ್ತ ಹೋದರು. ಆ ಬಾಲಕರು 'ನಾನು ಸೈನಿಕನಾಗಬಯಸುವೆ, ನಾನು ಕ್ಯಾಪ್ಟನ್ ಆಗ ಬಯಸುವೆ, ನಾನು ಜನರಲ್ ಆಗಬಯಸುವೆ' ಎಂದು ಹೇಳುತ್ತಿದ್ದರು. ಈಗ ಉಳಿದವರಿಗಿಂತ ಕುಳ್ಳ ಇದ್ದುದರಿಂದ ಕೊನೆಗೆ ನಿಂತಿದ್ದ. ಬಹಳ ಬಡ ಹುಡುಗ. ಆತನಿಗೂ ಅದೇ ಪ್ರಶ್ನೆ. ನೆಪೋಲಿಯನ್ ಹೇಳಿದ 'ನಾನು ಈ ಯೂರೋಪ್ ಖಂಡದ ಮಹಾದೊರೆಯಾಗಬೇಕು'. ಎಂಥ ಬಯಕೆ ! ಏನು ಅಭೀಪ್ಸೆ! ಆತನ ಅಣು ಅಣು ಮಹಾರಾಜನಾಗ ಬಯಸುತ್ತಿತ್ತು. ಆ ಬಯಕೆ ಆತನ ಆಂತರಿಕ ತಪಸ್ಸು. ಅದಕ್ಕಾಗಿ ಆತ ಸಹಿಸಿದ ಅಪಾರ ಕಷ್ಟಗಳು, ಮಾಡಿದ ಸಾಧನೆ, ಬಾಹ್ಯ ತಪಸ್ಸು. ಅದು ಫಲವಿತ್ತಿತ್ತು. ಜಗತ್ತೇ ಬೆರಗುಗೊಂಡು ನೋಡಿತ್ತು. ಆತ ಕೆಲವೇ ವರುಷಗಳಲ್ಲಿ ಅಜೇಯ ಚಕ್ರಾಧಿಪತಿಯಾದ !

ನಮ್ಮಲ್ಲಿ ಈ ಬಗೆಯ ದ್ವಿವಿಧ ತಪದ ಕೊರತೆ ! ಇಲ್ಲದಿದ್ದರೆ ನಮ್ಮ ದೇಶ ಹೀಗೇಕೆ ಇರುತ್ತಿತ್ತು? ನೂರು ಕೋಟಿಗೆ ಸಮೀಪಿಸಿದ ಜನ, ವಿಶಾಲ ನಾಡು, ನಿಸರ್ಗ ಸಂಪದ, ಸಂಪೂರ್ಣ ಸ್ವಾತಂತ್ರ್ಯ, ಆದರೂ ಬಡತನ, ಕೈಯಾಸೆ, ಅಪ್ರಾಮಾಣಿಕತೆ, ವ್ಯಸನಾಧೀನತೆ, ನೈಚ್ಯಮನೋಭಾವ ! ಇದನ್ನೆಲ್ಲ ತೆಗೆದುಹಾಕಬಲ್ಲೆವು, ಭವ್ಯ ಸಮೃದ ಸತ್ವಪೂರ್ಣ ಭಾರತ ಕಟ್ಟಬಲ್ಲೆವು, ಎಂಬ ಮಾತು ಕೂಡ ನಮಗೆ ಆಡಲು ಧೈರ್ಯವಿಲ್ಲ. ಕಾರ್ಪಣ್ಯದೋಷ ನಮ್ಮೊಳಗೆ. ಇದು ಅಭೀಪ್ಸಾ ತಪದ ಅಭಾವ. ಒಬ್ಬ ಗಾಂಧಿ. ಬಡಕಲು ದೇಹ, ಬರಿಗೈ, ಬರಿ ಮೈ. ಆದರೆ ಅದ್ಭುತ ಸಂಕಲ್ಪ ಶಕ್ತಿ ! ಸತ್ಯಪ್ರೇಮದ ಸಾಮರ್ಥ್ಯ. ಒಳಗೆ ತುಂಬಿ ತುಳುಕುವ ಮಂತ್ರ ಸಾಮರ್ಥ್ಯ. ತಪಶ್ಶಕ್ತಿ ! ಕೋಟಿ ಜನರನ್ನು ಆ ಮಾತು ಪ್ರೇರೇಪಿಸಿತು. ಅದರ ಫಲವಾಗಿ ಬ್ರಿಟಿಷ್ ದೊರೆ ಪಲಾಯನ ! ಅಂಥ ಒಬ್ಬ ತಪಸ್ವಿ ಇಂದಿನ ಭಾರತಕ್ಕೆ ನವಜೀವನ ನೀಡಬಲ್ಲ.

ತಪ ಮೊದಲನೆಯದು. ಸ್ವಾಧ್ಯಾಯ ಎರಡನೆಯದು. ಬಲ್ಲವರ, ಮಹಾಬಲರ, ಸತ್ವಶೀಲರ, ಅನುಭಾವಿಗಳ ಮಾತುಗಳನ್ನು ಆಲಿಸಿ ಅಂತರಂಗ ತುಂಬಿಕೊಳ್ಳುವುದು ಸ್ವಾಧ್ಯಾಯ.

ಮೂರನೆಯದು ಈಶ್ವರ ಪ್ರಣಿಧಾನ. ಪ್ರಚಂಡ ಸಾಹಸ ಮಾಡಿ ಕೊನೆಗೆ ಎಲ್ಲವೂ ಭಗವತ್ ಕಾರುಣ್ಯ ! ನಾನೇನು ಮಾಡಬಲ್ಲೆ? ಅವನ ಸಾಧನ ನಾನು ! ಆತ ಸರ್ವಕರ್ತ. ಕರುಣಾಮಯಿ. ನಮ್ಮೆಲ್ಲ ಮಹಾ ಸಾಧನೆಗಳು ಅವನ ಪ್ರಸಾದ. ಹೀಗೆ ಭಾವ ತಾಳಿದರದು 'ಪ್ರಣಿಧಾನ'!

ಈ ಮೂರು ಕೂಡಿ ಕ್ರಿಯಾಯೋಗ. ಇದರಿಂದ ಮನೋವಿಕಾಸ. ತಪದಿಂದ ಮನಸ್ಸು ಸಬಲವಾಗುತ್ತದೆ. ಸ್ವಾಧ್ಯಾಯದಿಂದ ಪರಿಶುಭ್ರ ಹಾಗೂ ಜ್ಞಾನ ಪೂರ್ಣವಾಗು ತ್ತದೆ. ಈಶ್ವರ ಪ್ರಣಿಧಾನದಿಂದ 'ನಿರಹಂ'ಕಾರಿಯಾಗುತ್ತದೆ. ಭಗವಂತನನ್ನು ಸ್ವೀಕರಿಸುವ ಸಾಮರ್ಥ್ಯ ಬರುತ್ತದೆ. ಇಂಥ ಮನಸ್ಸೇ ವಿಕಸಿತ ಮನಸ್ಸು. ಅರಳಿದ ಮನಸ್ಸು.

ರವೀಂದ್ರನಾಥ ಟಾಗೂರರು ಬಹಳ ದೊಡ್ಡ ಜ್ಞಾನಿ. ಗೀತಾಂಜಲಿಯಂತೂ ಅಮರ ಕೃತಿ. ಅಲ್ಲಿ ಅವರ ಆಧ್ಯಾತ್ಮದ ಬೆಳಕನ್ನು ಕಾಣಬೇಕು. ಎಂಥ ಸುಂದರ ಕಥೆ. ಅಲ್ಲೊಂದು ಮಾತು ಅವರು ಹೇಳುತ್ತಾರೆ. 'ನಾನೀಗ ನಿನ್ನ ಪದತಲದಿ ಕುಳಿತಿದ್ದೇನೆ. ನಿನ್ನಲ್ಲಿ ಒಂದು, ಒಂದೇ ಪ್ರಾರ್ಥನೆ. ನನ್ನ ಬದುಕನ್ನೊಂದು ಕೊಳಲಾಗಿಸು. ನನ್ನ ಹೃದಯವನ್ನು ನಿನ್ನ ಮಧುರ ಕಾವ್ಯಗಾನದಿಂದ ತುಂಬಿ ಬಿಡು ! ನನ್ನ ಸರಲ ಬದುಕಿನಿಂದ ನಿನ್ನ ಅಮರ ಸಂಗೀತ ಹೊರಹೊಮ್ಮಿಸು !' ಕ್ರಿಯಾಯೋಗ ಕವಿ ರವೀಂದ್ರರನ್ನು ಋಷಿಯಾಗಿಸಿದೆ. ಅವರ ಮನಸ್ಸು ಅರಳಿ ಹರವಾಗಿದೆ. ಭಗವಂತನ ಸ್ಪರ್ಶ ಹೊಂದಿದೆ ! ನಮ್ಮ ಬದುಕು ಅದೊಂದು ಕೊಳಲಾಗಬೇಕು. ಕೊಳಲಿನಲ್ಲಿ ಏನೂ ಇಲ್ಲ; ಬರಿದು. ಆ ಕೊಳಲಿನ ಮೂಲಕ, ಮನಸ್ಸಿನ ಮೂಲಕ, ಭಗವಂತ ದಿವ್ಯ ನಿನಾದವನ್ನು ಪ್ರಾರಂಭಮಾಡುತ್ತಾನೆ. ಆ ನಿನಾದಗಳೇ ಚಿಂತನೆಗಳು.

(ಕೃಪೆ : ಭಗವಚ್ಚಿಂತನ)





# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಈಚಿನ ಶೋಧಗಳು

- ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

ಸೋಗಲದಲ್ಲಿ ಬೃಹತ್ ಶಿಲಾಯುಗದ ಕಲ್ಲಾಸರೆಯ ಕುರುಹುಗಳು, ಮುರುಗೋಡದ ಗವಿಗಳು, ಇತ್ಯಾದಿಗಳನ್ನು ಗಮನಿಸಿದರೆ ಅಗಸ್ತ್ಯನ ಸಂಚಾರ ಈ ಕ್ಷೇತ್ರಗಳು ಮೂಲಕ ನಡೆದಿರಬಹುದು ಅಥವಾ ಅಗಸ್ತ್ಯ ಪರಂಪರೆಯಲ್ಲಿ ಬಂದ ಅದೇ ಹೆಸರಿನ ಇನ್ನೋರ್ವ ಮುನಿಯ ರೂಪವೂ, ಮುನವಳ್ಳಿಯಲ್ಲಿ ಸ್ಮರಣ ಪ್ರತೀಕವಾಗಿರಬಹುದು. ಇದಲ್ಲದೆ ಸವದತ್ತಿಗೆ ಅಂಟಿರುವ ಗಡಿಪ್ರದೇಶವನ್ನು (ಧಾರವಾಡ ಇತ್ಯಾದಿ) ಮತ್ಸ್ಯದೇಶವೆಂದಿರುವುದು, ಹಾನುಗಲ್ಲು ಕದಂಬರ ಚಂದ್ರವರ್ಮ ಈ ಮತ್ಸ್ಯದೇಶದಿಂದ ಪಶ್ಚಿಮಘಟ್ಟಗಳ ಕೊಡಗು ಪ್ರದೇಶದತ್ತ ಸಾಗಿ ಸಂಚರಿಸುವಲ್ಲಿ, ಕೊಡಗಿಗೂ ಮತ್ಸ್ಯದೇಶವೆಂದು ಕರೆದಿರುವ ಐತಿಹ್ಯವಿರುವುದು ಗಮನಾರ್ಹ. ಹೀಗೆಯೇ 'ಕೋಸಲ'ದಿಂದ ಅಗಸ್ತ್ಯ ಹೊರಟನೆಂಬ ಪ್ರಮೇಯವನ್ನಿಟ್ಟುಕೊಂಡರೂ ಸೋಗಲ, ಮುನವಳ್ಳಿ, ಮುರುಗೋಡ, ಮಲೆಯಾಚಲ ಪ್ರದೇಶಗಳು ಅವನ ಅನುಷ್ಠಾನ ಕ್ಷೇತ್ರಗಳಲ್ಲಿ ಕೂಡಿಕೊಂಡಿರಬಹುದು. ಅಗಸ್ತ್ಯನ ಎಂಟು ಜಡೆಯ ಶಿವಯೋಗಿ ಸ್ವರೂಪವೂ ಪ್ರಾಚೀನತೆಗೆ ಪೋಷಕ ಗೌರವ ಸಂಕೇತವಾಗಿ ಉಳಿದುಬಂದಿತೆನ್ನಬೇಕು. ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ತಪೋನುಷ್ಠಾನ ಕ್ಷೇತ್ರವಾದ ಕಗ್ಗೆರೆಯ ತೋರುಗದ್ದುಗೆಯ ದೇಗುಲದ ಸ್ತಂಭದ ಮೇಲೆ ಎಂಟು ಜಟೆ ಸಿಂಬಿಯ ಸ್ಥಾನಕ ಶಿವಯೋಗಿಯ ಶಿಲ್ಪ ಕೆತ್ತಲ್ಪಟ್ಟಿರುವುದು ಪರಂಪರೆಗೆ ಸಂದಗೌರವ ಎನಿಸುತ್ತದೆ. ಸಂಬಂಧಿಸಿದಂತೆ ಮಲೆಯಾಚಲ ಪ್ರದೇಶಕ್ಕೆ ರೇಣುಕ-ಅಗಸ್ತ್ಯರ ಸಂಬಂಧಗಳನ್ನು ಪಾರಂಪರಿಕವಾಗಿ ಹೇಳುವುದುಂಟು.

ಶ್ರೀ ಗೋಸಲಾರ್ಯ ಯತಿಗಳ ಗುರುವರ್ಗವನ್ನು, ತಮ್ಮ ವಚನದಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿಕೊಳ್ಳುವಲ್ಲಿ ತೋಂಟದ ಸಿದ್ಧಲಿಂಗಯತಿಗಳು ತಿಳಿಸಿದ್ದಾರೆ. 'ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೃತ ಷಟ್‌ಸ್ಥಲಜ್ಞಾನ ಸಾರಾಮೃತ ಟೀಕೆಗಳು ಭಾಗ-೧'ರಲ್ಲಿ ಸ್ತೋತ್ರವಚನಗಳಲ್ಲಿ [4] ೮ನೆಯ ವಚನದಲ್ಲಿ ಈ ವಿಷಯ ಬಂದಿದೆ:

'ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ । ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ ...

ಆದಿಲಿಂಗದೇವರ ಶಿಷ್ಯನು ಚನ್ನವೀರೇಶ್ವರದೇವರು । ಚೆನ್ನವೀರೇಶ್ವರದೇವರ ಶಿಷ್ಯರು ಹರದನಹಳ್ಳಿಯ

ಗೋಸಲದೇವರು । ಹರದನಹಳ್ಳಿಯ ಗೋಸಲದೇವರ ಶಿಷ್ಯರು ಶಂಕರದೇವರು । ಅನಾದಿ ಸಂಸಿದ್ಧವಾದ

ವೀರಶೈವಾಚಾರ ಸಂಪತ್ತು ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ'

ಇದಕ್ಕೆ ಬರೆದಿರುವ ಟೀಕು ಹೀಗಿದೆ:

'ಅಂತು ಮಲ್ಲದೆ ... ಆದಿಲಿಂಗದೇವರ ಶಿಷ್ಯರು ಚನ್ನವೀರೇಶ್ವರದೇವರು - ಆದಿಲಿಂಗದೇವರೆಂಬ

ಶಿವಾಚಾರ್ಯರಿಂದುಪದೇಶವನು ಹಡದು ಅವರೇ ಕರ್ತೃ ತಾವೇ ಭೃತ್ಯರಾಗಿ ಕರ್ತೃಭೃತ್ಯ ಭಾವವನು

ಮುಂದುಗೊಂಡು ಆಚರಿಸಲ್ಪಟ್ಟಂಥವರುಗಳೆ ಚೆನ್ನವೀರೇಶ್ವರ ದೇವರು-ಚೆನ್ನವೀರೇಶ್ವರದೇವರೆಂಬ

ಶಿವಾಚಾರ್ಯರು, ಚೆನ್ನವೀರೇಶ್ವರದೇವರ ಶಿಷ್ಯರು ಹರದನಹಳ್ಳಿಯ ಗೋಸಲದೇವರು-ಚನ್ನವೀರೇಶ್ವರ

ದೇವರೆಂಬ ಶಿವಾಚಾರ್ಯರಿಂದ ಉಪದೇಶವನು ಹಡದು ಅವರೇ ಕರ್ತೃ ತಾವೇ ಭೃತ್ಯರಾಗಿ ಕರ್ತೃಭೃತ್ಯತ್ವ

ಭಾವವನ್ನು ಮುಂದುಗೊಂಡು ಆಚರಿಸಲ್ಪಟ್ಟಂಥ ವರುಗಳೆ ಹರದನಹಳ್ಳಿಯ ಗೋಸಲದೇವರು-

4. ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೃತ ಷಟ್‌ಸ್ಥಲ ಜ್ಞಾನಸಾರಾಮೃತ ಟೀಕೆಗಳು, ಭಾಗ-೧, (ಸಂ.) ಡಾ. ವೀರಣ್ಣ ರಾಜೂರ, ೨೦೦೫, ಕರ್ನಾಟಕ ಧಾರ್ಮಿಕ ಇಲಾಖೆ, ಪು.೧೨-೧೪.

* ನಂ. ೨೨೧, 'ಅನರ್ಘ್ಯ, ಶ್ರೀ ಜ.ಚ.ನಿ. ಕೃಪೆ' ೬ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦



ಸಂಶೋಧನೆ





ತೋಂಟದ ಸಿದ್ಧಲಿಂಗೇಶ್ವರರ ಅನುಷ್ಠಾನ ಕ್ಷೇತ್ರ ಕಗ್ಗೆರೆ ಗದ್ದುಗೆ ಗರ್ಭಗೃಹದಲ್ಲಿ ನಂಬಿಯಣ್ಣ, ಸ್ಥಂಭಗಳಲ್ಲಿ ಎಂಟು ಜಡೆಯ ಹಿರಿಯ ಚಿಟ್ಟಿಗ ದೇವ ವೀರಭದ್ರ ಶಿಲ್ಪ

ಹರದನಹಳ್ಳಿಯ ಗೋಸಲದೇವರೆಂಬ ಶಿವಾಚಾರ್ಯರು; ಹರದನಹಳ್ಳಿಯ ಗೋಸಲದೇವರ

ಶಿಷ್ಯರು .... ಶಂಕರದೇವರೆಂಬ ಶಿವಾಚಾರ್ಯರು ....'

ಈ ವಚನವಲ್ಲದೆ ಗೋಸಲಾರ್ಯಸ್ವಾಮಿ(ಗೋಸಲ ಸಿದ್ದೇಶ್ವರರು)ಗಳ ಕುರಿತ ಕ್ರಿ.ಶ.೧೩೪೫(೧೩೨೪!)ರ ಹೊಯ್ಸಳ ೪ನೆಯ ವೀರಬಲ್ಲಾಳನ ಕಾಲದ ಹರದನಹಳ್ಳಿ ತಾಮ್ರಶಾಸನೋಕ್ತಿಗಳನ್ನು ಗಮನಿಸಬೇಕು [5]:

'ಶ್ರೀಮದ್ಗೋಸಲಾರ್ಯಯತಿ ಪ್ರಸೀದ ... ಅವಿರಳಜ್ಞಾನಾನಂದ ಪರಂಜ್ಯೋತಿ ಸ್ವರೂಪ ...

ಪರಬ್ರಹ್ಮೇಷ್ಟಲಿಂಗಾರಾಧಕತತ್ತ್ವಮಸ್ಯಾದಿ ಮಹವಾಕ್ಯ ವಿಚಾರಧುರೀಣ ... ಶ್ರೀಮದ್ವಾಣಿಜ್ಯಪುರಿ

ಮಠಾಧಿಪತಿ ಅನಾದಿಗಣ ಮರುಳಾರ್ಯವಂಶ ಪರಂಪರಾನುಗ । ತ ಪರಿವಿಡಿದ್ರಾಜಗುರು ಅಪ್ಪಣಾರ್ಯ

ನಿಜಗರ್ಭಸಂಜನಿತ ... ಮಹನಿಜಪಟ್ಟಮೂರ್ತಿಯಾಗಿ ... ತುಳುವದೇಶಕ್ಕೆ ಬಂದು ತುಲಕಾಣ್ಯರಿಗೆ

ಮಹಿಮೆಯುಂ ತೋರಿ ಶತಪವಾಡ ಮಹನೀಯರೆಂದು ಬಿರುದು ಪಡೆದ । ಶ್ರೀಮದ್ಗೋಸಲಾರ್ಯಸ್ವಾಮಿ ಸನ್ನಿಧಾನ ...'

-ಎಂದೆಲ್ಲ ಹೇಳಿರುವಲ್ಲಿ ಗೋಸಲಾರ್ಯಸ್ವಾಮಿಗಳ ಇತಿವೃತ್ತದ ಯಾದಿ ತುಂಬಿಕೊಂಡಿರುವಂತಿದೆ.

ಇದರ ಜೊತೆಗೆ ಷಟ್‌ಸ್ಥಲಜ್ಞಾನಸಾರಾಮೃತ ಟೀಕೆಗಳು, ಸ್ತೋತ್ರವಚನಗಳಲ್ಲಿ (ಟೀಕೆ ೨ರಲ್ಲಿ) [6] ಶ್ರೀ ಗೋಸಲದೇವರು ಸೊಗಲದಲ್ಲಿ ಗುರುಗಳಾದ ಚನ್ನವೀರೇಶ್ವರದೇವರ ಸನಿಹದಲ್ಲಿ ವಾಸವಾಡುತ್ತಾ, ಅಂತೇವಾಸಿಗಳಾಗಿದ್ದು, ಶಿವಾನುಭವ ಪಡೆದು ಚರಂತಿಕೆಪಟ್ಟವನ್ನು ಪಡೆದರು, ಎಂದಿದೆ. ಚನ್ನವೀರೇಶ್ವರ ಶಿವಾಚಾರ್ಯರ ಮಠವೂ ಸೋಗಲಕ್ಷೇತ್ರ (ಸೋಗಲಾಶ್ರಮ!)

ಗರ್ಭಗೃಹದ ಬಲಬದಿ ಕೋಷ್ಠದಲ್ಲಿ ನಂಬಿಯಣ್ಣ ದಂಪತಿಗಳ ಉಬ್ಬುಶಿಲ್ಪ

5. ಎ.ಕ. ಸಂ.೪(ಹೊಸತು), ೧೯೭೫, ಚಾ.ನ. ೨೯೨, (ಹರದನಹಳ್ಳಿ, ಕ್ರಿ.ಶ.೧೩೪೫ (ಕ್ರಿ.ಶ.೧೩೨೪). ಈ ತಾಮ್ರಶಾಸನವನ್ನು ನೈಜಶಾಸನವೆಂದು ನ್ಯಾಯಾಲಯವು ದೃಢೀಕರಿಸಿರುವ ಬಗ್ಗೆ ಪ್ರೊ. ಸಿ. ಮಹದೇವಪ್ಪನವರು ಶ್ರೀ ಸಿದ್ಧಗಂಗಕ್ಷೇತ್ರದಿಂದ ೧೯೭೦ರಲ್ಲಿ ಪ್ರಕಟವಾದ ದಾಸೋಹಸಿರಿ ವಜ್ರಮಹೋತ್ಸವ ಸ್ಮರಣ ಸಂಪುಟ) ಪು. ೨೧೯ರಲ್ಲಿ ನ್ಯಾಯಾಲಯದ ತೀರ್ಪನ್ನು ಉದ್ಧೃತ ಮಾಡಿದ್ದಾರೆ.

6. ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೃತ ಷಟ್‌ಸ್ಥಲಜ್ಞಾನ ಸಾರಾಮೃತ ಟೀಕೆಗಳು, ಸ್ತೋತ್ರದ ವಚನಗಳು, ಟೀಕೆ ೨, ಪು.೧೬, ಅದೇ., ೨೦೦೫.

ಹರದನಹಳ್ಳಿಯ ಗೋಸಲ ಸಿದ್ದೇಶ್ವರರ ಗದ್ದುಗೆ ಮಠದ ಮುಖಗೋಪುರ

ಮುನಿವಳ್ಳಿಯಲ್ಲಿದ್ದು ಗೋಸಲದೇವರಿಗೆ ಮಠದ ಪರಿಸರ ಹಾಗೂ ವ್ಯವಸ್ಥೆಯ ಪೂರ್ಣ ಅರಿವು ಬಂದಿರಬೇಕು. ಶಿವಾನುಭವ ಚರಂತಿಕೆ ಪಟ್ಟಪಡೆದ ಕಾರಣ, ದೇಶಸಂಚಾರ ಅಗತ್ಯವಾದ ಕರ್ತವ್ಯವಾಗಿ ಶಿವಾಚಾರ ಪ್ರಸಾರಕ್ಕೆ ಅವರನ್ನು ಸೊಗಲಕ್ಷೇತ್ರ ಅಣಿ ಮಾಡಿತೆನ್ನಬೇಕು.

ಶಾಸನದ ರೀತ್ಯಾ ರಾಜಗುರುವಂಶದಿಂದ ಗೋಸಲಾರ್ಯಸ್ವಾಮಿಗಳು ಬಂದವರು. ದೇಶಸಂಚಾರದಲ್ಲಿ ತುಳುವನಾಡಿಗೆ ಹೋಗಿ ತುಲಕಾಣ್ಯರಿಗೆ ಯಶಸ್ವಿಯಾಗಿ ಶಿವಮಹಿಮೆ ತೋರಿ ಶತಪವಾಡ ಮಹನೀಯರೆನಿಸಿದರು. ವಾಣಿಜ್ಯಪುರಿ ಮಠಾಧಿಪತಿಗಳಾದವರು ಎಂದೆಲ್ಲ ಇದೆ. ವಚನದ ಟೀಕು ೧ರಲ್ಲಿ ಅವರ ದೀಕ್ಷಾಗುರುವಿನ ಹೆಸರಿದೆ. ಅವರಲ್ಲಿ ಶಿಷ್ಯತ್ವ ನಡೆಸಿ ಸೇವೆ ಸಲ್ಲಿಸಿದ ಬಗೆ ಇದೆ. 'ಗೋಸಲದೇವ' ಹೆಸರಿಗೆ 'ಹರದನಹಳ್ಳಿ'ಯ ಎಂಬ ಉಪಾಧಿ ಅಂಟಿರುವಲ್ಲಿ ಅವರ ಮೂಲನೆಲೆ 'ಹರದನಹಳ್ಳಿ' ಎಂಬ ಸೂಚನೆ ಒದಗುತ್ತದೆ. ಅವರ ತೀರ್ಥರೂಪರು ಹೊಯ್ಸಳರಿಗೆ ರಾಜಗುರುಗಳಾಗಿದ್ದ ಸೂಚನೆ ಶಾಸನದಲ್ಲಿಯೆ ದೊರೆಯುತ್ತದೆ. ವಚನದ ಟೀಕು ೨ರಲ್ಲಿಯು 'ಹರದನಹಳ್ಳಿ' ಗೋಸಲದೇವರು ಅಂತೇವಾಸಿಗಳಾಗಿ ಸೊಗಲ ಕ್ಷೇತ್ರದಲ್ಲಿದ್ದಾಗ 'ಹರದನಹಳ್ಳಿಯ ಗೋಸಲದೇವರು' ಎಂಬ ಹೆಸರು ಮಾತ್ರ ಉಕ್ತಗೊಂಡಿದೆ. ಅವರು ಶಿವಾನುಭವ ಚರಂತಿಕೆ ಪಟ್ಟ ಪಡೆದು ದೇಶಸಂಚಾರ ಮಾಡಿ ಮೂಲನೆಲೆ ಹರದನಹಳ್ಳಿಗೆ ಬಂದಾಗ 'ಶ್ರೀ ಗೋಸಲಾರ್ಯಯತಿ' 'ಶ್ರೀಮದ್ಗೋಸಲಾರ್ಯಸ್ವಾಮಿ', ಶ್ರೀಮದ್ವಾಣಿಜ್ಯಪುರಿ ಮಠಾಧಿಪತಿ' ಎಂಬ ಗೌರವಪೂರ್ಣ ನಾಮಾವಳಿ ಶಾಸನೋಕ್ತವಾಗಿ ಕಂಡುಬರುತ್ತದೆ. ಸೊಗಲ ಕ್ಷೇತ್ರದಲ್ಲಿದ್ದಾಗಾಗಲಿ, ಹರದನಹಳ್ಳಿಯಲ್ಲಿದ್ದಾಗಾಗಲಿ ಗೋಸಲಾರ್ಯರಿಗೆ, **'ಗೋಸಲಸಿದ್ಧೇಶ್ವರ'** ಎಂಬ ಅಭಿಧಾನ ಕಾಣುವುದಿಲ್ಲ. ಅದು ಸಿದ್ಧಗಂಗೆಯಲ್ಲಿ ಜಲಾವತರಣದ ಜಲಸಿದ್ಧಿ ತೋರಿದ ಮೇಲೆ ಬಂದ ಅಭಿಧಾನವಾಗಿ ಕಾಣುತ್ತದೆ, ಇರಲಿ.

*(ಮುಂದುವರೆಯುತ್ತದೆ)*

ಗೋಸಲಾರ್ಯ ವಂಶದವರೆನ್ನಲಾದ ಅಮಚವಾಡಿ-ಚೆನ್ನಾಪುರದ ಆರಾಧ್ಯ ಮನೆತನದ ಅರ್ಚಕ ಶ್ರೀ ಷಣ್ಮುಖಾರಾಧ್ಯರ ಮನೆಯಲ್ಲಿ ವೀರಭದ್ರ-ಭದ್ರಕಾಳಿಯರ ಉತ್ಸವ ಮೂರ್ತಿಗಳು

**ಶ್ರೀಯುತ ರಾ. ವೆಂಕಟೇಶ ಶೆಟ್ಟಿ ರವರಿಗೆ**

ಮಾನ್ಯರೇ,

ಸಿದ್ಧಗಂಗಾ ಏಪ್ರಿಲ್ 2017ರ ಸಂಚಿಕೆ ಪುಟ 28ರಲ್ಲಿ ಶ್ರೀವಾಣಿ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗಿರುವ ಸುದ್ದಿ ಪರಮಪೂಜ್ಯ ಶ್ರೀ ಶ್ರೀಗಳವರು ಹೇಳಿದುದಲ್ಲ. ಪತ್ರಿಕೆಯ ಅಚಾರ್ಯಕತೆಯಿಂದ ಪ್ರಕಟಿತವಾದುದು. ಇದರಿಂದ ಆರ್ಯ ವೈಶ್ಯ ಜನಾಂಗದ ಬಂಧುಗಳ ಮನಸ್ಸಿಗೆ ನೋವುಂಟಾಗಿರುವುದಕ್ಕೆ 'ಸಿದ್ಧಗಂಗಾ' ಮಾಸಪತ್ರಿಕೆಯ ಸಂಪಾದಕನಾದ ನಾನು ವಿಷಾದವನ್ನು ವ್ಯಕ್ತಪಡಿಸುತ್ತಾ ಕ್ಷಮೆಯನ್ನು ಕೋರುತ್ತೇನೆ.

ನಮಸ್ಕಾರಗಳು

**ಹೆಚ್.ವಿ. ವೀರಭದ್ರಯ್ಯ**
ಸಂಪಾದಕ

**ರಾ. ವೆಂಕಟೇಶ ಶೆಟ್ಟಿ**
ನಿರ್ದೇಶಕ ಮತ್ತು ಮಾಧ್ಯಮ ಅಧಿಕಾರಿ
ಆರ್ಯ ವೈಶ್ಯ ಸಂಘ, ಚಿತ್ರದುರ್ಗ





# ಕನಕಪುರ ಶ್ರೀ ದೇಗುಲ ಮಠದ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು

– ಎಚ್.ಎಸ್. ಸಿದ್ಧಗಂಗಪ್ಪ *

**ಶ**ರಣರ ಜೀವನ ಮೌಲ್ಯಗಳನ್ನು, ಆದರ್ಶಗಳನ್ನು ಮೈಗೂಡಿಸಿಕೊಂಡು ಸತ್ಪಥದಲ್ಲಿ ಮುನ್ನಡೆಯುತ್ತಾ, ಕನಕಪುರ ಶ್ರೀ ದೇಗುಲಮಠದ ಕೀರ್ತಿ ಗೌರವವನ್ನು ಅಂತರರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ಯಬೇಕೆಂದು ಕನಸು ಕಂಡವರು ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು. ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಕರಕಮಲ ಸಂಜಾತರಾಗಿ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ಮಾರ್ಚ್, ೨೩, ೧೯೯೮ ರಂದು ನಿರಂಜನ ಪಟ್ಟಾಧಿಕಾರ ಸ್ವೀಕರಿಸಿದ ನಂತರ ಶ್ರೀ ಮಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸಲು ಸಂಕಲ್ಪ ಮಾಡಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಸಾಕಾರಗೊಳಿಸುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು.

ತ್ರಿಕಾಲ ಲಿಂಗಪೂಜೆ, ಧರ್ಮನಿಷ್ಠೆ, ಕ್ರಿಯಾಶೀಲತೆ, ದೂರದೃಷ್ಟಿ, ಅನುಕಂಪ, ಮಾನವೀಯತೆ, ಶ್ರೀಮಠದ ಭಕ್ತರೊಂದಿಗೆ ಆತ್ಮೀಯ ಸಂಬಂಧ, ದೀನ-ದಲಿತರ ಬಗ್ಗೆ ಕಳಕಳಿ, ಕರ್ತವ್ಯ ನಿಷ್ಠೆ, ಅಧ್ಯಯನ ಈ ಎಲ್ಲಾ ಮಾನವೀಯ ಗುಣಗಳ ಸಂಗಮವಾಗಿದ್ದರು ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗಸ್ವಾಮಿಗಳು.

ಶ್ರೀಮಠದ ಆಡಳಿತಕ್ಕೆ ಸಂಬಂಧಪಟ್ಟಂತೆ ಗುರು-ಶಿಷ್ಯರ ಆಪ್ತಸಮಾಲೋಚನೆ

ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರ ಪೂರ್ವಾಶ್ರಮದ ಹೆಸರು ಶ್ರೀ ರೇಣುಕೇಶ್. ಹುಟ್ಟಿದ ದಿನಾಂಕ ೧೫-೫-೧೯೭೩. ಹುಟ್ಟಿದ ಊರು ತುಮಕೂರು ತಾಲ್ಲೂಕಿನ ಹೆಬ್ಬೂರು ಹೋಬಳಿಯ ಕೆಂಬಳಲು ಪುಣ್ಯಗ್ರಾಮ. ಹಡೆದ ಪುಣ್ಯಜೀವಿಗಳು ತಂದೆ ಶರಣ ಶ್ರೀ ವಿಶ್ವೇಶ್ವರಯ್ಯ, ತಾಯಿ ಶರಣೆ ಶ್ರೀಮತಿ ರೇಣುಕಮ್ಮ, ಸುಸಂಸ್ಕೃತ ಕುಟುಂಬ. ಗುರುಲಿಂಗ ಜಂಗಮ ಪ್ರೇಮಿಗಳಾಗಿದ್ದು, ಶ್ರೀ ಸಿದ್ಧಗಂಗಾ ಮಠ ಹಾಗೂ ಹಾಗೂ ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಅನನ್ಯ ಭಕ್ತಿ ಗೌರವವನ್ನಿಟ್ಟು ಕೊಂಡಿದ್ದರು.

**ಶಿಕ್ಷಣ :**

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಹುಟ್ಟೂರಿನಲ್ಲಿ ಪಡೆದರು, ಪ್ರೌಢಶಿಕ್ಷಣವನ್ನು ಕನಕಪುರ ದೇಗುಲ ಮಠದಲ್ಲಿ ಪಡೆದರು. ಆ ವೇಳೆಗಾಗಿ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಕೃಪಾದೃಷ್ಟಿಗೆ ಪಾತ್ರರಾದರು. ಪ್ರೌಢ ಶಿಕ್ಷಣದ ಜೊತೆಗೆ ಸಂಸ್ಕೃತ ಕಾವ್ಯ ಮತ್ತು ವೇದ ಪರೀಕ್ಷೆಗಳಲ್ಲಿ ಉತ್ತೀರ್ಣರಾದರು. ನಂತರ ಹೆಚ್ಚಿನ ಶಿಕ್ಷಣಕ್ಕೆ ಶ್ರೀ ಸಿದ್ಧಗಂಗಾ ಮಠದ ಆಶ್ರಯದಲ್ಲಿದ್ದು ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜಿನಲ್ಲಿ ಪಿ.ಯು.ಸಿ. ಹಾಗೂ ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಪದವಿ ಶಿಕ್ಷಣವನ್ನು ಪಡೆದರು.

ಶ್ರೀ ಸಿದ್ಧಗಂಗಾ ಮಠದಲ್ಲಿದ್ದ ಅವಧಿಯಲ್ಲಿಯೇ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತ ಮತ್ತು ವೇದಾಧ್ಯಯನ ಶಿಕ್ಷಣವನ್ನು ಪಡೆದರು, ಬೆಂಗಳೂರು ಅಂಚೆ ಶಿಕ್ಷಣ ತೆರಪಿನ ಮೂಲಕ ಕನ್ನಡ ಸ್ನಾತಕೋತ್ತರ ಪದವಿಯನ್ನು ಪಡೆದರು.

ಶ್ರೀಮಠದಲ್ಲಿದ್ದಾಗ ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸೇವೆ ಮಾಡುವ ಸದಾವಕಾಶ



ಸಾಹಿತಿಗಳೊಂದಿಗೆ ಪೂಜ್ಯರಾದ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ಹಾಗೂ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಲ್ಲಿಸುತ್ತಿರುವ ಪೂಜ್ಯರಾದ ಮುಮ್ಮಡಿ ನಿರ್ವಾಣ ಸ್ವಾಮಿಗಳು ಹಾಗೂ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು




ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು

ದೊರೆಯಿತು. ಪರಮಪೂಜ್ಯರ ಸೇವೆ ಮಾಡುತ್ತಲೇ ಲೌಕಿಕ ಜೀವನಕ್ಕಿಂತ ಆಧ್ಯಾತ್ಮಿಕ ಜೀವನದ ಕಡೆ ಆಕರ್ಷಿತರಾದರು.

ಶ್ರೀ ರೇಣುಕೇಶ್ ಅವರ ಶಿವಪೂಜಾ ನಿಷ್ಠೆ, ಶ್ರದ್ಧೆ, ಕರ್ತವ್ಯ ನಿಷ್ಠೆ, ಸೇವಾ ಮನೋಭಾವ, ಗುರು ಹಿರಿಯರಲ್ಲಿ ಭಕ್ತಿ, ಗೌರವ, ಇದೆಲ್ಲವನ್ನು ಪೂಜ್ಯ ಶ್ರೀ ಶ್ರೀಗಳವರು ಸೂಕ್ಷ್ಮವಾಗಿ ಗಮನಿಸುತ್ತಿದ್ದರು.

ಶ್ರೀ ದೇಗುಲಮಠಕ್ಕೆ ಉತ್ತರಾಧಿಕಾರಿಯ ಆಯ್ಕೆ ಮಾಡುವ ಶುಭ ಸಂದರ್ಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಗಮನಕ್ಕೆ ಶ್ರೀ ರೇಣುಕೇಶ್ ಅವರು ಬಂದರು. ಪರಮಪೂಜ್ಯರ ಆಶಯದಂತೆ ಮಾರ್ಚ್ ೨೩, ೧೯೯೮ ರಂದು ಶ್ರೀ ದೇಗುಲ ಮಠದಲ್ಲಿ ನಡೆದ ಅಭೂತಪೂರ್ವ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳವರ ದಿವ್ಯ ಸಮ್ಮುಖದಲ್ಲಿ ನಿರಂಜನ ಚರಪಟ್ಟಾಧಿಕಾರ ನೀಡಿ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳೆಂಬ ಅಭಿದಾನದಿಂದ ಅನುಗ್ರಹಿಸಲಾಯಿತು.

ಶ್ರೀ ಸಿದ್ಧಗಂಗಾ ಹಾಗೂ ಶ್ರೀ ದೇಗುಲ ಮಠದ ಶ್ರೀ ಶ್ರೀಗಳವರ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ಶ್ರೀಮಠವನ್ನು ಸರ್ವತೋಮುಖ ಅಭಿವೃದ್ಧಿಯತ್ತ ಕೊಂಡೊಯ್ಯಲು ಕಟಿಬದ್ಧರಾದರು. ಅವರ ಚಿಂತನೆ, ದೂರದರ್ಶಿತ್ವ, ಮಠವನ್ನು ಸಾಧನಾ ಪಥದಲ್ಲಿ ಮುನ್ನಡೆಸಬೇಕೆಂಬ ಸಂಕಲ್ಪದ ಒಳನೋಟಗಳಿಂದ ಭಕ್ತರ ಮನದಲ್ಲಿ ಆಶಾಕಿರಣವಾಗಿ ಬಿಂಬಿತವಾದರು ಶ್ರೀಮಠದಲ್ಲಿ ಆಶ್ರಯ ಪಡೆದ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣದ ಜೊತೆಗೆ ಉತ್ತಮವಾದ ಸೌಲಭ್ಯ, ಸಂಸ್ಕಾರ ನೀಡಬೇಕೆನ್ನುವ ಕಳಕಳಿ ಅಪಾರವಾದುದು.

**ಲಿಂಗೈಕ್ಯ**

ಶ್ರೀಮಠದ ಸಹಸ್ರ ಸಹಸ್ರ ಭಕ್ತಾದಿಗಳ ಆಶಾಕಿರಣವಾಗಿದ್ದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ಭಕ್ತರ ಆಶಯಕ್ಕೆ ನ್ಯಾಯ ದೊರಕಿಸಿ ಕೊಡುವ ನಿಟ್ಟಿನಲ್ಲಿರುವಾಗಲೇ ಭಗವಂತ ತನಗೆ ಬೇಕೆಂದು ಮೇ. ೨೧, ೨೦೧೭ ರಂದು ಕರೆದುಕೊಂಡ. ಎರಡು ವರ್ಷಗಳಿಂದ ಅನಾರೋಗ್ಯಕ್ಕೆ ತುತ್ತಾಗಿದ್ದ ಶ್ರೀಗಳು ಎಲ್ಲರ ಭರವಸೆಯನ್ನು ಹುಸಿಗೊಳಿಸಿ ಲಿಂಗದೊಳಗಾದರು.

"ಜವರಾಯ ಬಂದರೆ ಬರಿಕೈಲಿ ಬರಲಿಲ್ಲ. ಕುಡಗೋಲೊಂದು ಹೆಗಲೇರಿಕೊಂಡು ಒಳ್ಳೊಳ್ಳೆ ಮರನ ಕಡಿಬಂದ" ಜನಪದ ತಾಯಿ ಹಾಡಿರುವ ಈ ತ್ರಿಪದಿ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳಂಥವರನ್ನು ಕಂಡೇ ಹಾಡಿರಬೇಕು. ೪೫ ವರ್ಷ ಈ ಲೋಕಕ್ಕೆ ವಿದಾಯ ಹೇಳುವ ವಯಸ್ಸಲ್ಲ.







ಶ್ರೀ ದೇಗುಲ ಮಠದ ಕಟ್ಟಡ ನಿರ್ಮಾಣದ ಗುದ್ದಲಿ ಪೂಜೆ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೊಂದಿಗೆ ದೇಗುಲಮಠದ ಶ್ರೀ ಶ್ರೀಗಳವರು.

ಪೂಜ್ಯ ಶ್ರೀಗಳವರು ಭೌತಿಕವಾಗಿ ನಮ್ಮಿಂದ ಕಣ್ಮರೆಯಾಗಿದ್ದರೂ ಅವರು ಎರಡು ದಶಕದ ಅವಧಿಯಲ್ಲಿ ಶ್ರೀಮಠದ ಅಭಿವೃದ್ಧಿಗೆ ಮಾಡಿದ ಸೇವೆ, ತೆಗೆದುಕೊಂಡ ನಿರ್ಧಾರಗಳು ಶ್ರೀಮಠದ ಇತಿಹಾಸದಲ್ಲಿ ದಾಖಲಿಸುವಂತಹದು.

ಪೂಜ್ಯರ ಲಿಂಗದೇಹವನ್ನು ಶ್ರೀ ಸಿದ್ಧಗಂಗಾ ಮಠಕ್ಕೆ ತಂದು ಅಂತಿಮ ದರ್ಶನಕ್ಕೆ ಇಡಲಾಗಿತ್ತು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಮಠದ ಸಿಬ್ಬಂದಿ, ಸಾರ್ವಜನಿಕರು ಅಂತಿಮ ದರ್ಶನ ಪಡೆದರು.

ಮೇ ೨೨ ರಂದು ಅವರ ಲಿಂಗದೇಹವನ್ನು ಕನಕಪುರದ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಮಾಡುವುದರ ಮೂಲಕ ಗೌರವ ಸಲ್ಲಿಸಲಾಯಿತು. ಈ ಮೆರವಣಿಗೆಯಲ್ಲಿ ಸಾವಿರಾರು ಜನ ಭಕ್ತರು, ಹಿತೈಷಿಗಳು ಭಾಗವಹಿಸಿ ಅಂತಿಮ ನಮನ ಸಲ್ಲಿಸಿದರು. ಅಂತಿಮ ಸಂಸ್ಕಾರ ಕಾರ್ಯಕ್ರಮದಲ್ಲಿ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಮರಳೇಗವಿ ಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು, ಕಂಚುಗಲ್ ಬಂಡೇಮಠದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು ಸೇರಿದಂತೆ ಮುನ್ನೂರಕ್ಕೂ ಹೆಚ್ಚು ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು.



ಕಟ್ಟಡ ನಿರ್ಮಾಣದ ನೀಲಿನಕ್ಷೆಯನ್ನು ಅವಲೋಕಿಸುತ್ತಿರುವ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು



ಶ್ರೀಮಠದ ಸಮಾರಂಭದಲ್ಲಿ ಭಾಗವಹಿಸಲು ಆಗಮಿಸುತ್ತಿರುವ ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರನ್ನು ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು ಬರಮಾಡಿಕೊಳ್ಳುತ್ತಿರುವುದು



ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು

ಪೂಜ್ಯ ಶ್ರೀ ಶ್ರೀಗಳವರ ಅಂತಿಮ ದರ್ಶನ ಪಡೆದು ಗೌರವ ಸಮರ್ಪಿಸಲು ಕನಕಪುರ ಮಾತ್ರವಲ್ಲದೆ, ದೆಹಲಿ, ಚಾಮರಾಜನಗರ, ಗುಂಡ್ಲುಪೇಟೆ, ತಾಳವಾಡಿ, ಟಿ.ನರಸೀಪುರ, ಕೊಳ್ಳೇಗಾಲ, ಮಾಗಡಿ, ತುಮಕೂರು, ಬೀದರ್, ವಿಜಯಪುರ, ರಾಯಚೂರು, ಕಲಬುರ್ಗಿ ಸೇರಿದಂತೆ ರಾಜ್ಯದ ವಿವಿಧ ಭಾಗಗಳಿಂದ ಶ್ರೀಮಠದ ಭಕ್ತರು, ಹಳೆಯ ವಿದ್ಯಾರ್ಥಿಗಳು ಭಾಗವಹಿಸಿದುದು ಪೂಜ್ಯ ಶ್ರೀ ಶ್ರೀಗಳವರ ಕ್ರಿಯಾಶೀಲ ಘನಶಿವ ವ್ಯಕ್ತಿತ್ವದ ದ್ಯೋತಕವಾಗಿತ್ತು. ■

## ಕನಕಪುರ ಶ್ರೀ ದೇಗುಲಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ಲಿಂಗೈಕ್ಯ



ಕನಕಪುರ ಶ್ರೀ ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು ಮೇ ೨೧ ರಂದು ತಮ್ಮ ೮೫ನೇ ವಯಸ್ಸಿನಲ್ಲಿ ಲಿಂಗೈಕ್ಯರಾದರೆಂದು ತಿಳಿಸಲು ಶ್ರೀ ಸಿದ್ಧಗಂಗಾ ವಿಷಾದಿಸುತ್ತದೆ.

ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರ ಪೂರ್ವಾಶ್ರಮದಲ್ಲಿ ಶ್ರೀಮಠದ ವಿದ್ಯಾರ್ಥಿಯಾಗಿದ್ದು ಕೆಲವು ವರ್ಷಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸೇವಾ ಮರಿಗಳಾಗಿ ಸೇವೆ ಸಲ್ಲಿಸಿ ಪೂಜ್ಯರ ಕೃಪಾದೃಷ್ಟಿಗೆ ಪಾತ್ರರಾಗಿದ್ದರು. ಶ್ರೀ ದೇಗುಲಮಠದ ಉತ್ತರಾಧಿಕಾರಿಯಾದ ಮೇಲೆ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಶ್ರೀಮಠವನ್ನು ಮುನ್ನಡೆಸಲು ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುವಲ್ಲಿ ಅವರು ಮಾಡಿದ ಪ್ರಮಾಣಿಕ ಪ್ರಯತ್ನ ಸ್ಮರಣೀಯ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಸಂತಾಪ ಸೂಚಿಸಿದ್ದಾರೆ. ಶ್ರೀ ಸಿದ್ಧಗಂಗಾ ಗುರುಪರಂಪರೆ, ಪೂಜ್ಯ ಶ್ರೀ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದೀರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ **ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸವನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322







# ಶರಣ ಧರ್ಮದ ಆಧ್ಯಾತ್ಮಿಕ ನಿಲುವುಗಳು

– ಡಾ|| ಜಿ.ಎಸ್. ಶಿವರುದ್ರಪ್ಪ *

ಕರ್ನಾಟಕದ ಪ್ರಮುಖ ಧರ್ಮವೂ, ಭಾರತದ ವಿಶಿಷ್ಟ ಧರ್ಮಗಳಲ್ಲಿ ಒಂದೂ – ಎಂದು ಪರಿಗಣಿತವಾಗಿರುವ ವೀರಶೈವ ಅಥವಾ ಲಿಂಗಾಯತ ಧರ್ಮದಲ್ಲಿ **'ಶರಣ'** ಎಂಬ ಮಾತಿಗೆ ವಿಶೇಷವಾದ ಅರ್ಥವಿದೆ. ಅದು ಈ ಧರ್ಮವನ್ನು ಒಪ್ಪಿಕೊಂಡ ಭಕ್ತರನ್ನು ಮಾತ್ರವಲ್ಲದೆ. ಈ ಧರ್ಮವು ಪ್ರವರ್ತನಗೊಂಡ, ಹನ್ನೆರಡನೆಯ ಶತಮಾನದ ಒಂದು ಸಾಮಾಜಿಕ-ಧಾರ್ಮಿಕ ಸ್ವರೂಪದ ಆಂದೋಲನದ ಸಂದರ್ಭದಲ್ಲಿ, ಅಂದಿನ ಶ್ರೇಣೀಕೃತ ವ್ಯವಸ್ಥೆಯ ವಿವಿಧ ಸಾಮಾಜಿಕ ಸರಗಳಿಗೆ ಸೇರಿದ ಶ್ರೀ ಸಾಮಾನ್ಯರು, ತಮ್ಮ ಪೂರ್ವಚಹರೆಗಳನ್ನು ಕಳೆದುಕೊಂಡು ಸಮಾನತೆಯ ನೆಲೆಯೊಂದರಲ್ಲಿ ಅವರು ಪಡೆದುಕೊಂಡ ಹೊಸ ವ್ಯಕ್ತಿತ್ವದ ಹೆಸರೂ ಆಗಿದೆ. ಎಂದರೆ ಅವರೆಲ್ಲರೂ ಮೂಲತಃ ಶರಣರು; ಅವರಿಂದ ನಡೆದದ್ದು ಶರಣ ಚಳುವಳಿ; ಈ ಚಳುವಳಿಯ ಸಂದರ್ಭದಲ್ಲಿ ಹುಟ್ಟಿಕೊಂಡದ್ದು ಶರಣ ಸಾಹಿತ್ಯ ಅಥವಾ ವಚನ ವಾಙ್ಮಯ. ಸ್ವಾರಸ್ಯದ ಸಂಗತಿ ಎಂದರೆ ಬಹು ಸಂಖ್ಯೆಯ ಈ ವಚನಗಳಲ್ಲಿ 'ಲಿಂಗಾಯತ', 'ವೀರಶೈವ' ಎಂಬ ಪದಗಳನ್ನು ದೀಪ ಹಚ್ಚಿಕೊಂಡು ಹುಡುಕಬೇಕಷ್ಟೆ! ಆದರೆ ಅತ್ಯಂತ ವಿಫುಲವಾಗಿ ಕಾಣಬಹುದಾದ ಪದ ಎಂದರೆ 'ಶರಣ' ಎನ್ನುವುವೇ. ಈ ಶರಣ ಚಳುವಳಿಯ ಕೇಂದ್ರ ವ್ಯಕ್ತಿಯಾದ ಬಸವಣ್ಣನವರ ವಚನಗಳಲ್ಲಿ ಉಳಿದೆಲ್ಲ ಪರಿಭಾಷೆಗಳಿಗಿಂತ 'ಶರಣ' ಎಂಬ ಪದವೇ ವಿಫುಲ ಸಂಖ್ಯೆಯಲ್ಲಿ ದೊರೆಯುತ್ತದೆ*.

'ಶರಣ' ಎಂದರೆ ಯಾರು ತನಗಿಂತ ದೊಡ್ಡದಾದುದೊಂದು ಇದೆ ಎಂದು ತಿಳಿದು, ಅದಕ್ಕೆ ವಿನಯದಿಂದ ತಲೆಬಾಗುತ್ತಾನೋ, ಶರಣು ಹೋಗುತ್ತಾನೋ ಅಥವಾ ತನ್ನನ್ನು ತಾನು ಸಮರ್ಪಿಸಿ ಕೊಳ್ಳುತ್ತಾನೋ ಅವನೇ ಶರಣನು. ಹಾಗೆ ನೋಡಿದರೆ 'ಶರಣ' ಎಂಬ ಮಾತು ಕಾಣಿಸಿಕೊಳ್ಳುವುದು ಇದೇ ಮೊದಲ ಸಲವೇನಲ್ಲ. ಎರಡು ಸಾವಿರದ ಆರುನೂರು ವರ್ಷಗಳಿಗೂ ಹಿಂದೆ ಭಗವಾನ್ ಬುದ್ಧನ ಕಾಲದಲ್ಲಿ ಮತ್ತು ಅನಂತರ ಇದೊಂದು ಮಂತ್ರ ಘೋಷದಂತೆ ಭಾರತದಾದ್ಯಂತ ಮೊಳಗಿದ ಪದ ಇದು; ಬುದ್ಧಂ ಶರಣಂ ಗಚ್ಛಾಮಿ; ಸಂಘಂ ಶರಣಂ ಗಚ್ಛಾಮಿ; ಧರ್ಮಂ ಶರಣಂಗಚ್ಛಾಮಿ. 'ಬುದ್ಧನಲ್ಲಿ ನಾನು ಶರಣು ಹೋಗುತ್ತೇನೆ. ಸಂಘದಲ್ಲಿ ಶರಣು ಹೋಗುತ್ತೇನೆ, ಅವನ ಧರ್ಮದಲ್ಲಿ ಶರಣು ಹೋಗುತ್ತೇನೆ.' ಮತ್ತೆ ಶರಣ ಎಂಬ ಈ ಮಾತು ಹಲವು ಸ್ತರಗಳಲ್ಲಿ ಬಳಕೆಗೊಂಡದ್ದು ಹಾಗೂ ವ್ಯಾಖ್ಯಾನಿತವಾಗಿದ್ದು ಹನ್ನೆರಡನೆಯ ಶತಮಾನದ ಶರಣ ಚಳುವಳಿಯ ಸಂದರ್ಭದಲ್ಲಿ. ಇಲ್ಲಿಯೂ 'ಶರಣ' ಎಂಬ ಮಾತು ಈ ಒಂದು ಧರ್ಮವನ್ನು ಒಪ್ಪಿಕೊಂಡವನು ಅಥವಾ ಆಶ್ರಯಿಸಿದವನು ಎಂಬ ಅರ್ಥವನ್ನು ಸೂಚಿಸುವುದರ ಜತೆಗೆ, ಶರಣ ಎನ್ನುವುದು ಒಂದು ವಿಶೇಷ ಅರಿವಿನ ಸ್ಥಿತಿಗೆ ಏರಿದ ಮನಸ್ಸಿನ ಲಕ್ಷಣಕ್ಕೆ ಸಂಕೇತವಾಗಿದೆ. ಅಷ್ಟೆ ಅಲ್ಲ ಭಕ್ತನಾದವನ ಆಧ್ಯಾತ್ಮಿಕ ವಿಕಾಸದ ಹಾದಿಯಲ್ಲಿ ಆತನ ಸಿದ್ಧಿಯ ಹಿಂದಿನ ಮೆಟ್ಟಿಲಿನ ಹಂತವನ್ನು ಸೂಚಿಸುತ್ತದೆ. ವೀರಶೈವ ತತ್ತ್ವಶಾಸ್ತ್ರದ ಪರಿಭಾಷೆಯಲ್ಲಿ ಈ ಹಂತವನ್ನು ಷಟ್‌ಸ್ಥಲಗಳಲ್ಲಿ ಒಂದಾದ 'ಶರಣಸ್ಥಲ' ಎಂದು ನಿರ್ದೇಶಿಸಲಾಗಿದೆ. ಇಂಥ ನೆಲೆಗೆ ಏರಿದ ಶರಣನನ್ನು ಕುರಿತು, ಬಸವಣ್ಣನವರು ವರ್ಣಿಸುವುದು; **'ಅರಿದರೆ ಶರಣ, ಮರೆದರೆ ಮಾನವ'** ಎಂಬ ಸೂತ್ರಪ್ರಾಯವಾದ ಉಕ್ತಿಯಲ್ಲಿ ಅರಿಯಬೇಕಾದದ್ದು ಯಾವುದನ್ನು? ಮರೆತಿರುವುದು ಯಾವುದನ್ನು? ಇದು ಮುಖ್ಯವಾದ ಪ್ರಶ್ನೆಗಳು. ಅರಿಯಬೇಕಾದದ್ದು ಇದು ; ನಾನು ಯಾರು ? ನನಗೂ ಈ ಜಗತ್ತಿಗೂ ಇರುವ ಸಂಬಂಧವೇನು? ನನಗೂ ಈ ಜಗತ್ತಿಗೂ ಮೂಲವಾದದ್ದು ಹಾಗೂ ಮೀರಿರುವುದು ಏನಾದರೂ ಇದೆಯೆ ? ಇದ್ದರೆ ಅದರ ಸ್ವರೂಪವೇನು? ಅದನ್ನು ಅರಿಯುವುದು ಅರ್ಥ ಮಾಡಿ ಕೊಳ್ಳುವುದು ಹೇಗೆ ? ಇದನ್ನೆ ನಮ್ಮಲ್ಲಿ ಅಧ್ಯಾತ್ಮಿಕ ಜಿಜ್ಞಾಸೆ ಎಂದು ಹೇಳಲಾಗಿದೆ. ಈ ಪ್ರಶ್ನೆಗಳ ಹಾದಿಯಲ್ಲಿ ಮುಂದುವರಿಯುವ ಮನೋಧರ್ಮವನ್ನೆ ಆಧ್ಯಾತ್ಮಿಕ ಪ್ರವೃತ್ತಿ ಎಂದು ಕರೆಯಲಾಗಿದೆ. ಜೀವ-ಜಗತ್ತು-ದೇವರು, ಈ ಮೂರರ ಸಂಬಂಧವನ್ನು ಅರಿಯುವುದೆ ಅಧ್ಯಾತ್ಮವಿದ್ಯೆ ಎನ್ನಿಸಿ ಕೊಳ್ಳುತ್ತದೆ. ವಾಸ್ತವವಾಗಿ ಅಧ್ಯಾತ್ಮ, ಅಧ್ಯಾತ್ಮವಿದ್ಯೆ, ಆಧ್ಯಾತ್ಮಿಕತೆ, ಈ ಪದಗಳು ಹಿಂದೂ ವೈದಿಕ ತತ್ತ್ವಜ್ಞಾನದ ಚರ್ಚೆಯ

* ಶ್ರೀ ಎಸ್.ಆರ್. ಗುಂಜಾಳ : ಬಸವಣ್ಣನವರ ವಚನ ಪದ ಪ್ರಯೋಗಕೋಶ, ೧೯೭೩ ಪ್ರ. ಜಗನ್ಮಾತಾ ಅಕ್ಕಮಹಾದೇವಿ ಆಶ್ರಮ, ಉಳವಿರಸ್ತೆ, ಧಾರವಾಡ-೩. ಬಸವಣ್ಣನವರ ಸುಮಾರು ೯೫೦ ವಚನಗಳಲ್ಲಿನ ವಿವಿಧ ನುಡಿಗಟ್ಟುಗಳನ್ನು ಪಟ್ಟಿಮಾಡಿರುವ ಈ ಪದಕೋಶದಲ್ಲಿ, ೨೫೦ ವಚನಗಳಲ್ಲಿ 'ಶರಣ' ಎಂಬ ಪದ ಹಲವು ಅರ್ಥಚ್ಛಾಯೆಗಳಲ್ಲಿ ಕಾಣಿಸಿಕೊಂಡಿದೆ.

* ರಾಷ್ಟ್ರಕವಿಗಳು, ಬೆಂಗಳೂರು

**ಶರಣ**

* ಯಾರು ತನಗಿಂತ ದೊಡ್ಡದಾದುದೊಂದು ಇದೆ ಎಂದು ತಿಳಿದು, ಅದಕ್ಕೆ ವಿನಯದಿಂದ ತಲೆಬಾಗುತ್ತಾನೋ, ಶರಣು ಹೋಗುತ್ತಾನೋ ಅಥವಾ ತನ್ನನು ತಾನು ಸಮರ್ಪಿಸಿಕೊಳ್ಳುತ್ತಾನೋ ಅವನೇ ಶರಣ.
* ಪರಂಪರಾಗತವಾದ ಹಿಂದೂ ವೈದಿಕ ಧರ್ಮಕ್ಕೆ ಬಸವಾದಿಗಳು ಹನ್ನೆರಡನೆಯ ಶತಮಾನದಂದು ತೋರಿದ ಪ್ರತಿಭಟನೆ ಮತ್ತು ಪ್ರತಿಕ್ರಿಯೆಗಳ ಕಾರಣ ದಿಂದ ನಿಷ್ಪನ್ನವಾದುದೇ ಶರಣಧರ್ಮ.
* ಶರಣಧರ್ಮ ಲೌಕಿಕವಾಗಿ ಮತ್ತು ಪಾರಮಾರ್ಥಿಕವಾಗಿ ಕಟ್ಟಿಕೊಡುವುದು ಕುಟುಂಬದ ಕಲ್ಪನೆಯನ್ನೇ. ಹೀಗಾಗಿ ಅದರ ತಾತ್ವಿಕ ತಳಹದಿಯೇ ಈ ಜೀವ ದೇವರ ಸಂಸಾರದ ಪ್ರತೀಕ
* ಸಂಸಾರಿಗಳ ಮನೆಯನ್ನು ಶಿವಯೋಗದ ಮಹಾಮನೆ ಯನ್ನಾಗಿ ಮಾಡಬೇಕೆನ್ನುವುದು ಶರಣರ ಹಾಗೂ ಶರಣಧರ್ಮದ ಉದ್ದೇಶ.

ಸಂದರ್ಭದಲ್ಲಿ ಹುಟ್ಟಿಕೊಂಡವುಗಳು. ಆದರೆ ನಾವು ಯಾವುದನ್ನು **'ಶರಣ ಧರ್ಮ'** ಎಂದು ಕರೆಯುತ್ತೇವೆಯೋ ಅದು, ಪರಂಪರಾಗತವಾದ ಹಿಂದೂ ವೈದಿಕ ಧರ್ಮಕ್ಕೆ ಬಸವಾದಿಗಳು ಹನ್ನೆರಡನೆಯ ಶತಮಾನದಂದು ತೋರಿದ ಪ್ರತಿಕ್ರಿಯೆ ಮತ್ತು ಪ್ರತಿಭಟನೆಗಳ ಕಾರಣದಿಂದ ನಿಷ್ಪನ್ನವಾದುದರಿಂದ, ಈ ಧರ್ಮದ ತಾತ್ವಿಕ ನಿಲುವುಗಳನ್ನು ವಿವರಿಸಲು, ಪರಂಪರಾಗತವಾದ ಹಿಂದೂ-ವೈದಿಕ ಧರ್ಮದ ಸಂಸ್ಕೃತ ಭಾಷೆಯ ಪರಿಕರಗಳನ್ನು ನಿರಾಕರಿಸಿ, ತಮ್ಮ ದೇಶೀಯವಾದ ಕನ್ನಡವನ್ನು ಹೊಸಧರ್ಮದ ವಿಚಾರಗಳ ಹಾಗೂ ಪ್ರಸಾರದ ಮತ್ತು ತತ್ತ್ವಜ್ಞಾನದ ಭಾಷೆಯನ್ನಾಗಿ ಸಜ್ಜುಗೊಳಿಸಿದ್ದು ಒಂದು ಮಹತ್ವದ ಸಾಧನೆಯತ್ತ ಅಷ್ಟೇ ಅಲ್ಲ ಶರಣರಿಗೆ ಈ ದೇಶದ ಶ್ರೀಸಾಮಾನ್ಯರ ಪರವಾಗಿ ಇರುವ ಕಾಳಜಿಗಳಿಗೆ ಸಾಕ್ಷಿಯಾಗಿದೆ ಮತ್ತು ಈ ಕ್ರಮ ಭಗವಾನ್ ಬುದ್ಧನ ಜೀವ ಕಾರುಣ್ಯದ ಪುನರಾವರ್ತನೆ ಯಾಗಿದೆ. ಬುದ್ಧ ಬಹು ಹಿಂದೆಯೇ ಹೇಳಿದ. ಧರ್ಮ ಇರುವುದು **'ಬಹುಜನ ಹಿತಾಯಚ'** ಎಂದು. ಶರಣ ಧರ್ಮದ ನಿಲುವೂ ಹೀಗೆಯೇ ಬಹುಜನ ಹಿತಕ್ಕೆ ಬದ್ಧವಾದದ್ದು. ಶರಣ ಧರ್ಮದೊಳಗಿನ **'ಬಹುಜನ'** ಹಿಂದೂ ಧರ್ಮದ **'ಮಹಾಜನ'**ದಂತೆ, ಅಕ್ಷರ ಜ್ಞಾನದ ಮತ್ತಿತರ ಸೌಲಭ್ಯಗಳನ್ನು ಪಡೆದ ಕೆಲವೇ ಕೆಲವು ಪ್ರತಿಷ್ಠಿತರಲ್ಲ. ಶರಣಧರ್ಮದ **'ಬಹುಜನ'** ಅಂದಿನ ಸಮಾಜದ ಹಲವು ಸ್ತರಗಳನ್ನು ಪ್ರತಿನಿಧಿಸುವ, ವಿವಿಧ ಕುಲಕಸುಬುಗಳ, ದುಡಿಯುವ ವರ್ಗದ, ಅಷ್ಟೇನೂ ವಿದ್ಯಾವಂತರಲ್ಲದ, ಆದರೆ ವಿಚಾರ ಮಾಡಬಲ್ಲ-ಜನ ಸಮುದಾಯವಾಗಿತ್ತು.

ಸಮುದಾಯದ ಭಾಷೆಯನ್ನು, ಹೊಸ ಧರ್ಮದ ಹಾಗೂ ತತ್ತ್ವಜಿಜ್ಞಾಸೆಯ ಭಾಷೆಯನ್ನಾಗಿ ರೂಢಿಸುವ ಮಹತ್ ಪ್ರಯತ್ನವೊಂದು ನಡೆದಾಗ, **'ಆಧ್ಯಾತ್ಮ'**ದ ಬದಲು **'ಅನುಭಾವ'** ಎಂಬ ಮಾತು, ದೇವರು ಅಥವಾ ಪರಬ್ರಹ್ಮದ ಬದಲು **'ಲಿಂಗ'** ಎಂಬ ಮಾತು **'ಮೋಕ್ಷ'**ದ ಬದಲು **'ಲಿಂಗಾಂಗ ಸಾಮರಸ್ಯ'** ಎಂಬ ಮಾತು ಮತ್ತು ಆ **'ತುರೀಯಾವಸ್ಥೆ'** ಅಥವಾ **'ಅನಿರ್ವಚನೀಯ'** ದ ಬದಲು **'ಬಯಲು'** ಅಥವಾ **'ಶೂನ್ಯ ಸಂಪಾದನೆ'** – ಎಂಬ ಮಾತು ಹುಟ್ಟಿಕೊಂಡದ್ದು ಅಂದಿನ "ದೇಸೀಯ ದಂಗೆ'ಯ ಪರಿಣಾಮಗಳೇ, ಈ ಹೊತ್ತು ಈ ಆಧ್ಯಾತ್ಮಿಕ ಅಥವಾ ದೈವೀ ಅನುಭವವನ್ನು ಸೂಚಿಸುವ Mystrism' 'Mystre experence' ಎಂಬ ಇಂಗ್ಲೀಷ್ ಪದಗಳು ಬಳಕೆಯಲ್ಲಿವೆ ಯಷ್ಟೆ ? ಆದರೆ ನಮ್ಮ ಭಾರತೀಯ ಸಂದರ್ಭದಲ್ಲಿ ಇದಕ್ಕೆ ಸಂವಾದಿಯಾಗಬಹುದಾದ ಸರಿಯಾದ ಪರಿಭಾಷಿಕವೊಂದು ಇರದಿದ್ದ ಕಾಲದಲ್ಲಿ, ಹನ್ನೆರಡನೆ ಶತಮಾನದಂದು ಶರಣರು, **'ಅನುಭಾವ'** ಎಂಬ ಪದವೊಂದನ್ನು ನಿರ್ಮಿಸಿ ಅದರ ಅರ್ಥಚ್ಛಾಯೆಗಳನ್ನು ತಮ್ಮ ಸೂಳ್ನುಡಿಗಳ ಅಥವಾ ಸಂವಾದದ ಸಂದರ್ಭದಲ್ಲಿ ವಿವರಿಸಿರುವ ಕ್ರಮ ತುಂಬ ಆಶ್ಚರ್ಯಕರವಾಗಿದೆ. ಶರಣರ, **'ಅನುಭಾವ'** ಎಂಬ ಈ ಪಾರಿಭಾಷಿಕವು, ಇಂಗ್ಲೀಷಿನ Mystism ಗೆ ಅತ್ಯಂತ ಸಮರ್ಥವಾಗಿ ಸಂವಾದಿ ಪದವಾಗಿ, ಭಾರತೀಯ ತತ್ತ್ವಶಾಸ್ತ್ರದ ಕೋಶಕ್ಕೆ ಕನ್ನಡವು ಬಹು ಹಿಂದೆಯೇ ಕೊಟ್ಟ ಕೊಡುಗೆಯಾಗಿದೆ ಎಂದು ಹೇಳಬಹುದು. ಈ ಅನುಭಾವ ಸಾಧನೆಯ ಹಾದಿಯಲ್ಲಿ ಹೊರಟ ವ್ಯಕ್ತಿಯನ್ನು **'ಶರಣ'** ಎಂದು ಕರೆಯಲಾಗಿದೆ. ಈ ಶರಣರ **'ಅನುಭಾವ ಸಾಧನೆ'**ಯ ಹಿಂದಿರುವ ಚಿಂತನೆಗಳೆ ಶರಣಧರ್ಮದ ಆಧ್ಯಾತ್ಮಿಕ ನಿಲುವುಗಳನ್ನು ಸ್ಪಷ್ಟಪಡಿಸುತ್ತವೆ.

ಶರಣ ಧರ್ಮದ ಆಧ್ಯಾತ್ಮಿಕ ಅಥವಾ ಅನುಭಾವಿಕ ನಿಲುವಿನ ಮೊದಲ ಲಕ್ಷಣವೆಂದರೆ, ಅದಕ್ಕೆ ಮೊದಲಿನ ಭಾರತದ ಹಲವು ಧರ್ಮಗಳಂತೆ, ಈ ಜಗತ್ತನ್ನು ಅಥವಾ ಲೋಕ ವಾಸ್ತವವನ್ನು ಮಿಥ್ಯೆ ಎಂದೋ, ಮಾಯೆ ಎಂದೋ ಭಾವಿಸದೆ ಈ ಜಗತ್ತೂ ಸತ್ಯ ಎಂದು ಅಂಗೀಕರಿಸಿದ ಕ್ರಮ. ಶರಣ ಧರ್ಮದ ಪ್ರಕಾರ ಈ ಜಗತ್ತು ಭಗವಂತನಿಂದ ದತ್ತವಾದ ಒಂದುವರ. **'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ'** ಎಂಬ ಜೇಡರ ದಾಸಿಮಯ್ಯನ ಉಕ್ತಿಯಲ್ಲಿ ಈ ನಿಲುವು ಮೊದಲು ಕಾಣಿಸಿಕೊಳ್ಳುತ್ತದೆ. ಹೀಗೆ ಭಗವಂತನಿಂದ ಮನುಷ್ಯನಿಗೆ ದಾನವಾಗಿ ಬಂದ ಜಗತ್ತು ಮಿಥ್ಯೆ ಹೇಗಾದೀತು ? ಇಂಥ "ದತ್ತ'ವಾದ ಬದುಕಿನಲ್ಲಿ ನೋವು-ದುಃಖ-ಸಂಕಟಗಳಿಲ್ಲವೆಂದೇನೂ ಅರ್ಥವಲ್ಲ. ಇದೊಂದು ದುಃಖ ಭೂಯಿಷ್ಠವಾದ ಜಗತ್ತೇನೋ ಹೌದು. **'ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ'** ಎನ್ನುತ್ತಾರೆ ಅಲ್ಲಮ ಪ್ರಭು. ಆದರೆ ಇಂಥ ಜಗತ್ತನ್ನು ಅದು





ಇದ್ದಂತೆಯೇ ಒಪ್ಪಿಕೊಂಡು ಅದನ್ನು ಎದುರಿಸಿ ನಿಲ್ಲಬೇಕು ಎನ್ನುವುದೇ ಇದರ ಹಿಂದಿರುವ ದೈವದ ಸಂಕಲ್ಪವಾಗಿದೆ.

*ಬಸವಣ್ಣನವರು ಹೇಳುವಂತೆ ಈ* ***'ಮರ್ತ್ಯವೆಂಬುದು ಕರ್ತಾರನ ಕಮ್ಮಟ'****. ಬದುಕಿನ ಈ ಕಮ್ಮಟದಲ್ಲಿ ಮನುಷ್ಯನ ವ್ಯಕ್ತಿತ್ವ* ***'ಕಡಿಹಕ್ಕೆ ಬಡಿಹಕ್ಕೆ'*** *ಸಿಕ್ಕು ತನ್ನ ಡೊಂಕುಗಳನ್ನು ಸರಿಪಡಿಸಿಕೊಂಡು "ಶರಣ'ನಾಗಬೇಕು. ಈ ಬದುಕನ್ನು ಮನುಷ್ಯ ಹೇಗೆ ಸ್ವೀಕಾರ ಮಾಡಬೇಕು ಎನ್ನುವುದನ್ನು ಕುರಿತು ಅಲ್ಲಮ ಪ್ರಭು ಮಂಡಿಸುವ ರೂಪಕ ಇದು :* ***'ಕೊಟ್ಟ ಕುದುರೆಯನೇರಲರಿಯದೆ, ಮತ್ತೊಂದು ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ'****. ಬದುಕು ನಮಗೆ ದತ್ತವಾದ (ಕೊಟ್ಟ) ಕುದುರೆ. ಇದನ್ನು ಏರಿ ಸವಾರಿ ಮಾಡಿ ಪಳಗಿಸಿಕೊಳ್ಳಬೇಕಾದದ್ದು ಸವಾರರ ಕರ್ತವ್ಯ. ಹೀಗೆ ಕೊಟ್ಟ ಕುದುರೆಯನ್ನು ಏರಲರಿಯದವರು* ***'ವೀರರೂ ಅಲ್ಲ, ಧೀರರೂ ಅಲ್ಲ'*** *ಇದು ಬದುಕನ್ನು ಒಂದು ಕೊಡುಗೆ ಎಂಬಂತೆ, ಸಂಸ್ಕಾರ ಕ್ಷೇತ್ರವೆಂಬಂತೆ, ಸವಾಲು ಎಂಬಂತೆ ಒಪ್ಪಿಕೊಳ್ಳಬೇಕು ಎಂಬ ವಾಸ್ತವ ಪ್ರಜ್ಞೆಯನ್ನೂ ಧೈರ್ಯವನ್ನು ಒಂದು ಮೌಲ್ಯವೆಂಬಂತೆ ಪ್ರತಿಪಾದಿಸುವುದು ಶರಣಧರ್ಮದ ಆಧ್ಯಾತ್ಮಿಕ ನಿಲುವುಗಳಲ್ಲಿ ಒಂದು.*

ಹೀಗೆ, ಇಹದ ಬದುಕನ್ನು ತನ್ನ ಅನಿವಾರ್ಯವೆಂಬಂತೆ ಒಪ್ಪಿಕೊಂಡ ಶರಣಧರ್ಮದ ಜೀವನ ಶ್ರದ್ಧೆ ಯಾವತ್ತೂ **'ಪರ'**ವನ್ನು ಕುರಿತ ಆಕರ್ಷಣೆ ಅಥವಾ ದ್ವಂದ್ವಗಳಿಂದಾಗಿ ಹೊಯ್ದಾಡಲಿಲ್ಲ ಎಂಬುದು ಒಂದು ವಿಶೇಷದ ಸಂಗತಿಯಾಗಿದೆ. ಯಾಕೆಂದರೆ ಬಹುತೇಕ ಧರ್ಮಗಳ ಹಾಗೆ ಪರಲೋಕ ಅಥವಾ ಸ್ವರ್ಗನರಕಾದಿಗಳ ಕಲ್ಪನೆಗೆ ಕಟ್ಟು ಬೀಳದೆ ಈ ಲೋಕದ ಬದುಕನ್ನು ಮುಖ್ಯವೆಂದು ಈ ಧರ್ಮ ಪರಿಗಣಿಸುತ್ತದೆ. ಹಿಂದೂ ಧರ್ಮವೂ ಸೇರಿದಂತೆ ಜಗತ್ತಿನ ಅನೇಕ ಪ್ರಮುಖ ಧರ್ಮಗಳು, ಮನುಷ್ಯನ ಬದುಕನ್ನು **'ಇಹ'** ಮತ್ತು **'ಪರ'** ಎಂದು ವಿಭಾಗಿಸಿ, ಪರಲೋಕ ಸಾಧನೆಯೇ ಜೀವನದ ಮಹೋದ್ದೇಶವೆಂಬ ನಿಲುವನ್ನು ಎತ್ತಿ ಹಿಡಿಯುತ್ತಾ, ವಾಸ್ತವ ಬದುಕಿನ ಜೀವನ ಪ್ರೀತಿಯನ್ನೂ ಹಾಗೂ ಬದುಕನ್ನೆದುರಿಸುವ ಧೈರ್ಯವನ್ನೂ ಕುಂಠಿತಗೊಳಿಸಿವೆ ಎಂದೇ ಹೇಳಬೇಕಾಗಿದೆ. **'ಪರ'** ದೊಂದಿಗೆ ಹೆಣೆದುಕೊಂಡ ಸ್ವರ್ಗ-ನರಕಗಳ ಕಲ್ಪನೆಗಳು ಒಂದು ರೀತಿಯಲ್ಲಿ ಮನುಷ್ಯನ ಬದುಕಿನ ನೈತಿಕತೆಯನ್ನು ನಿಯಂತ್ರಿಸುವಂತೆ ತೋರಿದರೂ, ಮನುಷ್ಯರಿಗೆ ಸ್ವರ್ಗವನ್ನು ಕುರಿತ ಆಕರ್ಷಣೆಗಳೂ, ನರಕವನ್ನು ಕುರಿತು ಇರುವ ಭಯಗಳೂ-ಎಲ್ಲ ದೇಶಗಳಲ್ಲೂ ಸಾಮಾನ್ಯ ಜನದ ನಂಬಿಕೆಗಳನ್ನು ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡು ಶೋಷಣೆಗೆ ಗುರಿಪಡಿಸುವ ಪುರೋಹಿತಶಾಹೀ ತಂತ್ರಗಳಿಗೆ ಅವಕಾಶ ಮಾಡಿಕೊಟ್ಟಿವೆ ಎಂಬ ಸಂಗತಿಯನ್ನು ತಳ್ಳಿ ಹಾಕುವಂತಿಲ್ಲ. ಇಂಥ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಶರಣ ಧರ್ಮವು ಪರಲೋಕದ ಕಲ್ಪನೆಯನ್ನು ಸಾರಾಸಗಟಾಗಿ ನಿರಾಕರಿಸುತ್ತ, ಸ್ವರ್ಗ-ನರಕಗಳೇನಿದ್ದರೂ, ಮನುಷ್ಯರು ತಮ್ಮ ಲೋಕ ವ್ಯವಹಾರದ ನೆಲೆಗಳಲ್ಲಿ ತಮ್ಮ ದೈನಂದಿನ ನಡವಳಿಕೆಗಳ ಮೂಲಕ ತಾವೇ ಸೃಷ್ಟಿಸಿಕೊಳ್ಳಬಹುದಾದ ಎರಡು ವಾಸ್ತವ ಸ್ಥಿತಿಗಳೇ ಹೊರತು ಬೇರೆ ಅಲ್ಲ – ಎಂಬ ವಿಚಾರವನ್ನು ಎತ್ತಿ ಹಿಡಿಯುತ್ತ, ಸಾಂಪ್ರದಾಯಿಕವಾದ ಸ್ವರ್ಗ-ನರಕಗಳ ಕಲ್ಪನೆಯನ್ನು ಹೀಗೆ ಬೌದ್ಧಿಕ ಚಿಕಿತ್ಸೆಗೆ ಒಳಪಡಿಸುತ್ತ ಮನುಷ್ಯ ಮೂಲತಃ ಈ ನೆಲಕ್ಕೆ ಸಂಬಂಧಿಸಿದವನು ಎಂಬ ಅಸ್ತಿತ್ವವಾದೀ ತತ್ತ್ವಜ್ಞಾನವನ್ನು ಪ್ರತಿಪಾದಿಸುತ್ತದೆ.+

ಮತ್ತೊಂದು ಮುಖ್ಯವಾದ ಸಂಗತಿ ಎಂದರೆ, ಯಾವುದೇ ಕಾರಣಗಳನ್ನು ಮುಂದೆ ಮಾಡಿ, ಈ ಲೋಕ ಜೀವನದಿಂದ ವ್ಯಕ್ತಿಗಳನ್ನು ವಿಮುಖರನ್ನಾಗಿ ಮಾಡುವ ಸನ್ಯಾಸ-ವೈರಾಗ್ಯ-ತಪಸ್ಸುಗಳನ್ನು ಶರಣಧರ್ಮ ಮುಖ್ಯವೆಂದು ಭಾವಿಸುವುದಿಲ್ಲ. ಬಸವಾದಿಗಳ ಕಾಲಕ್ಕೆ ಹಿಂದೆ ಇದ್ದ ಭಾರತದ ಬಹುತೇಕ ಧರ್ಮಗಳು ವಿಶೇಷವಾಗಿ ನಿವೃತ್ತಿಯನ್ನು ಅಥವಾ ಸಂಸಾರವಿಮುಖತೆಯನ್ನು ಒತ್ತಿ ಹೇಳಿದ ಧರ್ಮಗಳು "ಈ ಲೋಕದ ಕರ್ತವ್ಯ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷಗಳ ಕಾಲ ಬದುಕೋಣ' (ಈಶಾವಾಸ್ಯ)- ಎಂಬ ಜೀವನ ಪ್ರೀತಿಯ ಮಾತನ್ನು ಹೇಳಿದ ಹಿಂದೂ ಧರ್ಮವೇ, ಈ ಸಂಸಾರದ ಬಗ್ಗೆ ಮತ್ತು ಸಂಸಾರದ ಮುಖ್ಯ ಭಾಗವಾದ ಹೆಣ್ಣಿನ ಬಗ್ಗೆ ಒಂದು ರೀತಿಯ ತಿರಸ್ಕಾರದ ಧೋರಣೆಗಳನ್ನು ಏರುದನಿಯಲ್ಲಿ ಹೇಳಿಕೊಂಡು ಬಂದದ್ದು ಮಾತ್ರವಲ್ಲದೆ, ಮುಖ್ಯವಾಗಿ ಪುರುಷ ಪ್ರಧಾನ ದೃಷ್ಟಿಕೋನಗಳನ್ನು ಎತ್ತಿ ಹಿಡಿಯುತ್ತ, ಬ್ರಹ್ಮಚರ್ಯ, ಗೃಹಸ್ಥ – ವಾನಪ್ರಸ್ಥ – ಮತ್ತು ಸನ್ಯಾಸ – ಎಂಬ ಜೀವನ ಕ್ರಮವನ್ನು ರೂಢಿಸುತ್ತ, ಗಂಡಸರಿಗಿರುವ ಸಾಮಾಜಿಕ ಮತ್ತು ಆಧ್ಯಾತ್ಮಿಕ ಸ್ವಾತಂತ್ರ್ಯಕ್ಕೆ, ಹೆಣ್ಣು ಬಾಧ್ಯಸ್ಥಳಲ್ಲವೆಂಬಂತೆ ನಡೆದುಕೊಂಡದ್ದು ಒಂದು ವಿಪರ್ಯಾಸವಾಗಿದೆ. ಇನ್ನು ಜೈನ ಬೌದ್ಧ ಧರ್ಮಗಳಂತೂ ನಿವೃತ್ತಿ ಮಾರ್ಗವನ್ನೆ – ಅಂದರೆ ಸಂಸಾರಕ್ಕೆ ವಿಮುಖವಾದ ಜೀವನ ಕ್ರಮವನ್ನು ವೈಭವಿಸುತ್ತ, ಅತ್ಯಂತ ಕಠಿಣವಾದ

---

+ "ದೇವಲೋಕ ಮರ್ತ್ಯಲೋಕವೆಂಬುದು ಬೇರೆಮತ್ತುಂಟೆ ?
ಈ ಲೋಕದೊಳಗೆ ಮತ್ತೆ ಅನಂತಲೋಕ ವ.೧೪೯ (ಬ.ನ)
"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲಾ ಕಾಣಿರೋ
ಸತ್ಯವ ನುಡಿವುದೇ ದೇವಲೋಕ. ಮಿಥ್ಯವ ನುಡಿವುದೆ ಮರ್ತ್ಯಲೋಕ
ಆಚಾರವೆ ಸ್ವರ್ಗ, ಅನಾಚಾರವೇ ನರಕ ವ. ೨೪೯ (ಬ.ವ)
"ಅಯ್ಯಾ' ಎಂದಡೆ ಸ್ವರ್ಗ
"ಎಲವೋ ಎಂದಡೆ ನರಕ' ವ. ೨೪೦ (ಬ.ವ)

[ಪ್ರ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,
ಬೆಂಗಳೂರು (೧೯೯೩)]

ವ್ರತಗಳ ಪರಿಪಾಲನೆಯನ್ನೆ ಅಧ್ಯಾತ್ಮ ಸಾಧನೆಯೆಂಬಂತೆ ಬಿಂಬಿಸುತ್ತ – ಮಹಿಳೆಯರು ಸುಲಭವಾಗಿ ಪಾಲುಗೊಳ್ಳಲು ಸಾಧ್ಯವಾಗದ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದವು. ಹೀಗಾಗಿ ಈ ಕೆಲವು ಧರ್ಮಗಳ ಪಾಲಿಗೆ ಸಂಸಾರ ವೆಂಬುದೊಂದು ಘನಘೋರ ವಿಷಯಾರಣ್ಯ; ಮತ್ತು ಹೆಣ್ಣು-ಹೊನ್ನು-ಮಣ್ಣುಗಳ ಪ್ರಲೋಭನ ಪ್ರಪಂಚ; ಈ "ಹೆಣ್ಣು-ಹೊನ್ನು-ಮಣ್ಣುಗಳೆಂಬ ಈ 'ಮಾಯೆ' ಯಿಂದ ಪಾರಾಗುವುದೇ ಮೋಕ್ಷ. ಇಂಥ ಪಾರಂಪರಿಕವಾದ ಗ್ರಹಿಕೆಯನ್ನು ಒರೆಗೆ ಹಚ್ಚಿ, ಅದರ ಪೊಳ್ಳುತನವನ್ನು ಬಯಲಿಗೆಳೆದವರು ಅಲ್ಲಮ ಪ್ರಭು ; ***'ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆ ಅಲ್ಲ ; ಹೊನ್ನು ಮಾಯೆ ಎಂಬರು, ಹೊನ್ನು ಮಾಯೆ ಅಲ್ಲ ; ಮಣ್ಣು ಮಾಯೆ ಎಂಬರು ಮಣ್ಣು ಮಾಯೆ ಅಲ್ಲ.*** ಮನದ ಮುಂದಣ ಆಸೆಯೇ ಮಾಯೆ ಕಣಾ ಗುಹೇಶ್ವರಾ'. ಇದು ಮಾಯೆಯನ್ನು ಕುರಿತು ಅತ್ಯಂತ ದಿಟ್ಟತನದ ಹಾಗೂ ಚೇತೋಹಾರಿಯಾಗಿ ವ್ಯಾಖ್ಯಾನ. ಇಂಥ ನಿಲುವಿಗೆ ***'ಮಠವೇಕೋ ಪರ್ವತವೇಕೋ ಜನವೇಕೋ ನಿರ್ಜನವೇಕೋ ಚಿತ್ತ ಸಮಾಧಾನ ಉಳ್ಳ ಶರಣಂಗೆ?'*** (ಅಲ್ಲಮ) ಇದು ಸಂಸಾರದ ನಡುವೆ ಇದ್ದುಕೊಂಡೇ **'ಚಿತ್ತಸ್ವಾಸ್ಥ್ಯ'**ವನ್ನು ಸಾಧಿಸುವ ಕಲೆಗಾರಿಕೆ. ಮನುಷ್ಯನು ತನ್ನ ಚಿತ್ತವ ಸಮಾಧಾನವನ್ನು ಸಾಧಿಸುವುದೆ ಆಧ್ಯಾತ್ಮದ ಮೊದಲ ಲಕ್ಷಣ. ಈ ಬಗೆಯ ಚಿತ್ತ ಸಮಾಧಾನವನ್ನು ಸಂಸಾರ ಜೀವನವು ಕೆಡಿಸುತ್ತದೆಂದೂ, ಆದಕಾರಣ ಸಾಧಕನು ಸಂಸರ್ಗ ದೂರವಾದ ಕಾಡುಮೇಡುಗಳಿಗೆ ಹೋಗುವುದೇ ಸರಿಯಾದ ಕ್ರಮ – ಎಂಬ ನಿವೃತ್ತಿ ಧರ್ಮಗಳ ಈ ತಿಳಿವಳಿಕೆಗೆ ಸಂಪೂರ್ಣ ವಿರುದ್ಧವಾದ ನಿಲುವು ಶರಣ ಧರ್ಮದ್ದು, ಆದ ಕಾರಣವೇ ಬಸವಾದಿ ಶರಣರಿಂದ ಪ್ರವರ್ತನಗೊಂಡ ಈ ಶರಣ ಧರ್ಮ, ವ್ಯಕ್ತಿಯಾದವನು ಸಂಸಾರದೊಳಗೆ ಇದ್ದುಕೊಂಡೇ, ಶಿವಯೋಗವನ್ನು ಸಾಧಿಸುತ್ತ, ಈ ಸಂಸಾರವನ್ನು ಮೀರಿ ನಿಲ್ಲುವುದು ಹೇಗೆ-ಎಂಬುದನ್ನು ಕುರಿತು ಚಿಂತಿಸಿದ ಧರ್ಮವಾಗಿದೆ. ಈ ಚಿಂತನೆಯ ಪರಿಣಾಮವಾಗಿ ನಿಷ್ಪನ್ನವಾದ ಸೂತ್ರವೆಂದರೆ : ***'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ'*** (ಜೇಡರ ದಾಸಿಮಯ್ಯ) – ಎನ್ನುವುದು. ಅಂದರೆ ಶರಣನ ಭಕ್ತಿಸಾಧನೆಯ ಮೂಲ, ***'ಸತಿಪತಿಗಳೊಂದಾದ'*** ಸಂಸಾರವೇ, ಈ ಹಿನ್ನೆಲೆಯಿಂದ ಹೇಳುವುದಾದರೆ ಶರಣ ಧರ್ಮ ಪ್ರತಿಪಾದಿಸುವುದು ವಿರಾಗಿಗಳ ಅಥವಾ ಸನ್ಯಾಸಿಗಳ ಧರ್ಮವನ್ನಲ್ಲ. ಸಂಸಾರಿಗಳ ಧರ್ಮವನ್ನು, ಅದು ಎಂದೂ ಸನ್ಯಾಸವನ್ನು ಸಂಸಾರಕ್ಕೆ ವಿರೋಧಿಯಾದುದೆಂದಾಗಲೀ, ದೊಡ್ಡದೆಂದಾಗಲೀ ಪರಿಗಣಿಸಲಿಲ್ಲ. ಈ ಲೋಕವನ್ನು ಹಾಗೂ ಅದರ ಕೇಂದ್ರವಾದ ಸಂಸಾರವನ್ನು ತನ್ನ ಅಸ್ತಿತ್ವದ ಮೊದಲ ನೆಲೆಯನ್ನಾಗಿ ಒಪ್ಪಿಕೊಳ್ಳುತ್ತದೆ. ಹಾಗೆ ನೋಡಿದರೆ ಹನ್ನೆರಡನೆಯ ಶತಮಾನದ ಶರಣ ಚಳುವಳಿಯಲ್ಲಿ ತೊಡಗಿಕೊಂಡವರೆಲ್ಲ – ಅಲ್ಲಮ, ಸಿದ್ಧರಾಮ ಇಂಥ ಕೆಲವರನ್ನು ಹೊರತುಪಡಿಸಿದರೆ – ಸಂಸಾರಿಗಳೇ, ಗೃಹಸ್ಥರೇ. ಕಾರಣಾಂತರದಿಂದ ಕಟ್ಟಿಕೊಂಡ ಗಂಡನನ್ನು ಬಿಟ್ಟು, ಶ್ರೀಶೈಲದ ಚನ್ನಮಲ್ಲಿಕಾರ್ಜುನನಿಗೆ ಒಲಿದ ಅಕ್ಕಮಹಾದೇವಿಯ ನಿಲುವೂ, ಉದಾತ್ತವಾದ ದಾಂಪತ್ಯ ಜೀವನದ ಕಲ್ಪನೆಯನ್ನೆ ಎತ್ತಿ ಹಿಡಿಯುತ್ತದೆ. ಹೀಗಾಗಿ ***'ಸತಿಪತಿಗಳೊಂದಾದ'*** ಸಂಸಾರವನ್ನು ತಮ್ಮ ಅಸ್ತಿತ್ವದ ಮೊದಲ ಘಟಕವನ್ನಾಗಿ ಒಪ್ಪಿಕೊಂಡು, ಇಡೀ ಸಮಾಜವನ್ನೆ ಪರಿವರ್ತಿಸಿದ ಶರಣಧರ್ಮ ಮೂಲತಃ ಕುಟುಂಬ ಕೇಂದ್ರಿತವಾದದ್ದು. ಅಷ್ಟೆ ಅಲ್ಲ, ಕುಟುಂಬದೊಳಗಿನ ಸತಿ-ಪತಿ ಎಂಬ ಭೇದವು ಕೂಡ ಕೇವಲ ಹೊರಗಿನ ತೋರಿಕೆಯದೇ ಹೊರತು, ತತ್ವಶಃ ಅವರಿಬ್ಬರ ನಡುವೆ ಯಾವ ವ್ಯತ್ಯಾಸಗಳೂ ಇಲ್ಲ – ಎಂಬ ವಿಚಾರವು ಮುನ್ನಲೆಗೆ ಬಂದದ್ದು ಮಹತ್ವದ ಸಂಗತಿಯಾಗಿದೆ. ***'ಮೊಲೆಮುಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ, ಬಂದರೆ ಗಂಡೆಂಬರು ; ನಡುವೆ ಸುಳಿವಾತ್ಮನು ಗಂಡೂ ಅಲ್ಲ, ಹೆಣ್ಣು ಅಲ್ಲ'*** (ಜೇಡರ ದಾಸಿಮಯ್ಯ) – ಎಂದು ಆತ್ಮದ ಪ್ರಾಮಾಣ್ಯದ ಮೂಲಮಾನದಲ್ಲಿ ಸ್ತ್ರೀ ಪುರುಷರ ಸಮಾನತೆಯನ್ನು ಎತ್ತಿ ಹಿಡಿದದ್ದು ಜಗತ್ತಿನ ಧಾರ್ಮಿಕ ಚರಿತ್ರೆಯಲ್ಲಿ ಅತ್ಯಂತ ಅಪರೂಪದ ಸಂಗತಿಯಾಗಿದೆ. ಭಾರತರ ಸಂದರ್ಭದಲ್ಲಂತೂ ಮಹಿಳೆಗೆ ಯಾವತ್ತಿನಿಂದಲೋ ನಿರಾಕರಿಸಲ್ಪಟ್ಟ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಅಧಿಕಾರಗಳನ್ನು ಮರಳಿ ತಂದುಕೊಟ್ಟು, ಪುರುಷರೊಂದಿಗೆ ನಿಲ್ಲ ಬಲ್ಲಂಥ ಘನತೆ ಗೌರವಗಳ ಸಮಾನತೆಯ ನೆಲೆಯೊಂದನ್ನು ನಿರ್ಮಿಸಿದ್ದು ಶರಣ ಧರ್ಮವೇ ಎಂದರೆ ಅದೇನೂ ಉತ್ಪ್ರೇಕ್ಷೆಯ ಮಾತಲ್ಲ. ಅಷ್ಟೆ ಅಲ್ಲ, ಈ ಸಮಾನತೆಯ ನೆಲೆಯಲ್ಲಿ ಗಂಡ-ಹೆಂಡಿರಿಬ್ಬರನ್ನೂ 'ಶರಣ-ಶರಣೆ'ಯರನ್ನಾಗಿ ಪರಿಗಣಿಸಿದ ಈ ಧರ್ಮ ***'ಶರಣ ಸತಿ-ಲಿಂಗಪತಿ'*** – ಎಂಬ ಮತ್ತೊಂದು ಆಧ್ಯಾತ್ಮಿಕ ಸಂಸಾರದ ಪರಿಕಲ್ಪನೆಯನ್ನು ಮಂಡಿಸುತ್ತದೆ. ಇದರ ಪ್ರಕಾರ ಆ **'ಲಿಂಗ'** ಅಥವಾ ಪರಾತ್ಪರ ವಸ್ತುವೇ ನಿಜವಾದ ಪತಿ ; ಇನ್ನುಳಿದವರೆಲ್ಲರೂ ಸತಿ ಅಥವಾ ಹೆಣ್ಣು. ಒಟ್ಟಾರೆಯಾಗಿ ಶರಣ ಧರ್ಮ ಲೌಕಿಕವಾಗಿ ಹಾಗೂ ಪಾರಮಾರ್ಥಿಕವಾಗಿ ಕಟ್ಟಿಕೊಡುವುದು ಕುಟುಂಬದ ಕಲ್ಪನೆಯನ್ನೇ. ಹೀಗಾಗಿ ಶರಣಧರ್ಮದ ತಾತ್ವಿಕ ತಳಹದಿಯೇ ಈ ಜೀವ ದೇವರ ಸಂಸಾರದ ಪ್ರತೀಕವಾಗಿದೆ.

ಬಸವಾದಿಗಳು ಕಟ್ಟಲು ಪ್ರಯತ್ನ ಪಟ್ಟ ಈ ಸಂಸಾರಧರ್ಮ ಹೇಗೆ ಗಂಡು-ಹೆಣ್ಣುಗಳ ನಡುವಣ ತರತಮಗಳನ್ನು ನಿರಾಕರಿಸಿ ಆಧ್ಯಾತ್ಮಿಕ ಸಮಾನತೆಯನ್ನು ಪ್ರತಿಪಾದಿಸಿತೋ, ಹಾಗೆಯೇ ಸಾಮಾಜಿಕ ನೆಲೆಯ ವರ್ಣಭೇದಗಳನ್ನೂ ತಿರಸ್ಕರಿಸುತ್ತದೆ. ಬಹುಕಾಲದಿಂದ ನೆಲೆನಿಂತ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು **'ವರ್ಣಸಂಕರ'** ದ ಸಿಡಿಮದ್ದಿನಿಂದ ಸ್ಫೋಟಿಸುತ್ತ,





**"ವಿಪ್ರಮೊದಲು ಅಂತ್ಯಜ ಕಡೆಯಾಗಿ'** ಉಳ್ಳ ಸಮಾಜದ ವಿವಿಧ ಸ್ತರಗಳವರನ್ನು "ಶರಣ'ರನ್ನಾಗಿ ಪರಿವರ್ತಿಸಿದ್ದು ಸಾಮಾನ್ಯವಾದ ಸಂಗತಿಯಲ್ಲ. ಆಧ್ಯಾತ್ಮ ಎಂದರೆ ಸಮಾನತೆಯನ್ನು ಕಾಣುವ ಮತ್ತು ಕಟ್ಟುವ ಒಂದು ಮನೋಧರ್ಮ ಎನ್ನುವುದಾದರೆ, ಶರಣ ಧರ್ಮವೂ ಆ ಕಾಲದ ಮಟ್ಟಿಗಾದರೂ ಇಂಥ ಒಂದು ಪ್ರಯೋಗವನ್ನು ಮಾಡಿ ತೋರಿಸಿದ್ದು ಮಹತ್ವದ ಸಂಗತಿಯಾಗಿದೆ.

ಕುಟುಂಬ ಕೇಂದ್ರಿತ ನಿಲುವಿನ ಶರಣ ಧರ್ಮದ ಮೂಲಕ ಬಸವಾದಿಗಳು ಕಟ್ಟಲು ಆಶಿಸಿದ್ದು **'ಮಹಾಮನೆ'** ಯನ್ನು ಮಹಾಮಠವನ್ನಲ್ಲ. ಬಸವಾದಿ ಶರಣರನ್ನು ಕುರಿತು ಹುಟ್ಟಿಕೊಂಡ ಕಾವ್ಯ-ಪುರಾಣಗಳಲ್ಲಿ ಕಾಣಿಸಿಕೊಳ್ಳುವುದು **'ಮಹಾಮನೆ'**ಯ ಚಿತ್ರವೇ. ಅಸಂಖ್ಯಾತ ಶರಣಗಣಗಳು ಶಿವಪೂಜಾ ಸಂಭ್ರಮದಲ್ಲಿ ತೊಡಗಿಕೊಂಡದ್ದು ಈ ಮಹಾಮನೆಯಲ್ಲೇ; **'ಮಹಾನುಭಾವ ಪ್ರಸಂಗ'**ಗಳೆಂದು ಕರೆಯಲಾದ ಅನುಭಾವಿಕ ಚರ್ಚೆ ಹಾಗೂ ಚಿಂತನೆಗಳನ್ನು ಅಂದಿನ ಶರಣರು ನಡೆಯಿಸಿದ್ದು ಈ ಮಹಾಮನೆಯಲ್ಲೇ. ಕಲ್ಯಾಣ ಕ್ರಾಂತಿಯ ಕೇಂದ್ರವಾದದ್ದು ಈ ಮಹಾಮನೆಯೇ. ಇದು ಸಂಸಾರಿಗಳ ಮನೆಯನ್ನು ಶಿವಯೋಗದ ಮಹಾ ಮನೆಯನ್ನಾಗಿ ಪರಿವರ್ತಿಸುವ ಪವಾಡ. ಹೀಗೆ ಮನೆಗಳನ್ನು ಮಹಾಮನೆಗಳನ್ನಾಗಿ ಮಾಡಬೇಕೆನ್ನುವುದೆ ಶರಣರ ಹಾಗೂ ಶರಣ ಧರ್ಮದ ಉದ್ದೇಶ. ಮನೆಗಳನ್ನು ಹೀಗೆ "ಮಹಾಮನೆ'ಗಳನ್ನಾಗಿ ಮಾಡಬೇಕಾದರೆ ಮನೆಯೊಳಗೆ ನಿಜವಾಗಿಯೂ ಇರಬೇಕಾದ ಮನೆಯೊಡೆಯ ನಿರಂತರವಾಗಿ ಇರುವಂತೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ***"ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ'*** ಎಂಬ ಸಂದೇಹಕ್ಕೆ ಆಸ್ಪದವಾಗುತ್ತದೆ ಮನೆಯ ಸ್ಥಿತಿ ! ಇಂಥ ಆಧ್ಯಾತ್ಮ ರಿಕ್ತತೆಯ ಪ್ರತೀಕವಾದ ಮನೆ*. ಮಹಾಮನೆಯಾಗ ಬೇಕಾದರೆ ಅದರೊಳಗಿನ ಶರಣ, ಸತಿಯಾಗಬೇಕು. ಲಿಂಗಪತಿಯಾಗಬೇಕು. ಆ ಮನೆಯೊಳಗಿನವರೆಲ್ಲ ಬಂಧು ಬಳಗದವರಾಗಬೇಕು. ಇಂಥ ಒಂದು ಸಂಸಾರದ ಕಲ್ಪನೆಯನ್ನು ಶರಣ ಧರ್ಮ ಕಟ್ಟಿಕೊಟ್ಟದ್ದರಿಂದಲೇ, ಶರಣರ ಸೂಳ್ನುಡಿಗಳಾದ ವಚನಗಳೊಳಗಿನ ಸಂಬೋಧನೆಯ ಹಾಗೂ ಸಂವಾದದ ಭಾಷೆ ಪ್ರೀತಿ – ವಿಶ್ವಾಸ – ಬಾಂಧವ್ಯಗಳ ನುಡಿಗಟ್ಟುಗಳಿಂದ ತುಂಬಿಕೊಂಡಿದೆ. ಅಣ್ಣ, ಅಕ್ಕ, ಅಯ್ಯ ಎಂಬ ಅಕ್ಕರೆಯ ಸಂಬೋಧನೆಗಳು ಶರಣರ ವ್ಯವಹಾರದಲ್ಲಿ ಸಮೃದ್ಧವಾಗಿ ಬಳಕೆಯಾಗುತ್ತ ಅವರೆಲ್ಲ ಒಂದೇ ಕುಟುಂಬಕ್ಕೆ ಸೇರಿದವರೆಂಬ ಭಾವನೆಯನ್ನು ದೃಢಪಡಿಸುತ್ತವೆ. ಪ್ರಾಸಂಗಿಕವಾಗಿ ಉಲ್ಲೇಖಿಸು ವುದಾದರೆ; ***'ಅಕ್ಕ ಕೇಳವ್ವ ನಾನೊಂದ ಕನಸಕಂಡೆ' 'ಉದ ಮುದದ ಯೌವನವನೊಳಕೊಂಡ ಸತಿ ನೀನು, ಇತ್ತಲೇಕೆ ಬಂದೆ ಯವ್ವಾ', 'ತೊರೆಯ ಮೀನ ಅಣ್ಣಗಳಿರಾ, ತೊರೆಯಿಂ ಭೋ' 'ನಾ ತಿರುಗುವ ರಾಟೆಯ ಕುಲಜಾತಿಯ ಕೇಳಿರಣ್ಣಾ'*** – ಇಂಥ ಕೆಲಸವನ್ನು ಗಮನಿಸಬಹುದು. ಅಷ್ಟೆ ಅಲ್ಲ, ಈ ಶರಣರು ತಮ್ಮ ತಮ್ಮ ಇಷ್ಟ ದೈವಗಳ ಜತೆಗೆ ಮಾತನಾಡುವ ಕ್ರಮ ಕೂಡ, ಈ ಬಗೆಯ ಬಾಂಧವ್ಯದ ಸ್ಪರ್ಶದಿಂದ ಕೂಡಿದೆ. ದೇವರು ಎಂಬುದು ತಮ್ಮಿಂದಾಚೆಯ ಬಹುದೂರದ ಅಥವಾ ಅತಿ ಎತ್ತರದ **'ಪರವಸ್ತು'**ವೋ, **'ಪ್ರಭುಶಕ್ತಿ'**ಯೋ ಎಂಬಂತೆ ಗೃಹೀತವಾಗದೆ. ದೇವರು ಕೂಡ ತಮ್ಮವನೇ, ತಮಗೆ ಹತ್ತಿರದವನೇ, ತಮ್ಮ ಕುಟುಂಬದೊಳಗಿನ ಒಬ್ಬನೇ, ತಮ್ಮ ಅನುಭಾವದ ಗಮ್ಯ ಹೇಗೋ, ಹಾಗೆ ತಮ್ಮ ದೈನಂದಿನ ಬದುಕಿನ ನೆನಹಿನಲ್ಲಿಯೂ ಹಾಸು ಹೊಕ್ಕಾದವನು – ಎಂಬ ಆತ್ಮೀಯತೆಯೊಂದು ಶರಣರ ದೈವೀ ವ್ಯವಹಾರದ ಭಾಷೆಯೊಳಗೆ ಪ್ರಕಟವಾಗುತ್ತದೆ ; ***'ಕೂಡಲ ಸಂಗಮ ದೇವ ಕೇಳಯ್ಯ', 'ಅಯ್ಯ ನೀನು ಕೇಳಿದರೆ ಕೇಳು, ಕೇಳದಿದ್ದರೆ ಮಾಣು, ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯ' 'ನೀನು ಕಲ್ಲಾದರೆ ನಾನೇನಪ್ಪೆನಯ್ಯಾ', 'ನೀನೊಮ್ಮೆ ನನ್ನಂತೆ ಒಡಲುಗೊಂಡು ನೋಡಾ', 'ಅಗಮ್ಯ, ಅಪ್ರಮೇಯ, ಅಗೋಚರಲಿಂಗವೆ ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ'*** – ಇಂಥ ಆತ್ಮೀಯ ಸಂಬೋಧನೆಗಳಲ್ಲಿ ಕಾಣುವ ದೇವರು, ಪುರಾಣಗಳ ದೇವರಲ್ಲ, ಶಾಸ್ತ್ರಗಳ ದೇವರಲ್ಲ, ದೇವಸ್ಥಾನಗಳಲ್ಲಿ ಸಾಂಪ್ರದಾಯಿಕವಾಗಿ ಪೂಜೆಗೊಳ್ಳುತ್ತಿದ್ದ ದೇವರಲ್ಲ. ರಾಜ ಮತ್ತು ಪುರೋಹಿತಶಾಹಿಯ ಪ್ರತಿನಿಧಿಗಳಾದ, ದೇವಸ್ಥಾನಗಳಿಂದ ಬಿಡುಗಡೆಗೊಂಡು ಪ್ರತಿಯೊಬ್ಬ ಮನುಷ್ಯರ ಶರೀರಕ್ಕೆ ಸ್ಥಳಾಂತರಗೊಂಡು ಭಕ್ತನ ಮನೆಯೊಳಗೆ ನೆಲೆಗೊಂಡ ಮನೆಯೊಡೆಯನಾದ ಇಷ್ಟಲಿಂಗವಾದ ದೇವರು. ಶರಣ ಧರ್ಮದ ಆಧ್ಯಾತ್ಮಿಕ ನಿಲುವುಗಳಲ್ಲಿ ಪರಂಪರಾಗತವಾದ ದೇವರ ಕಲ್ಪನೆಗೆ ಒದಗಿದ ಈ ರೂಪಾಂತರವೂ ವಿಶಿಷ್ಟವಾದದ್ದು.

*

---

* ಮನೆಯೊಳಗೆ ಮನೆಯೊಡೆಯ
ಇದ್ದಾನೊ ಇಲ್ಲವೊ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ತನುವಿನೊಳಗೆ ಹುಸಿ ತುಂಬಿ
ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯ ನಿಲ್ಲ, ಕೂಡಲ ಸಂಗಮ ದೇವಾ.

[ಬ.ವ.೯೭ (ಕ.ಸಂ.ನಿ. ೧೯೩೩)]



# ಶರಣ ಸಂಸ್ಕೃತಿಯ ಮಹಾನ್ ಚಿಂತಕ
# ಡಾ. ಬಸಪ್ಪ ದಾನಪ್ಪ ಜತ್ತಿ

- ಎಚ್.ಎಸ್. ಸಿದ್ಧಗಂಗಪ್ಪ *

**ಮೂ**ರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ಗಾದೆ ಶ್ರೀ ಬಿ.ಡಿ. ಜತ್ತಿಯವರನ್ನು ಕಂಡೇ ಹೇಳಿರಬೇಕು. ಆಕಾರದಲ್ಲಿ ವಾಮನನಂತಿದ್ದರೂ ಗೊಮ್ಮಟನ ವಿಶೇಷ ವ್ಯಕ್ತಿತ್ವ, ಸರಳತೆ, ಸಜ್ಜನಿಕೆ, ವಿನಯವಂತಿಕೆ, ಸಹೃದಯತೆ, ಹೃದಯ ವೈಶಾಲ್ಯತೆ, ಕಾಯಕ ನಿಷ್ಠೆ, ಆಡಳಿತದಲ್ಲಿ ದಕ್ಷತೆ, ಪಾರದರ್ಶಕತೆ, ದೀನ ದಲಿತರ ಬಗ್ಗೆ ಅನುಕಂಪ, ಕರುಣೆ, ವಾತ್ಸಲ್ಯ, ಪ್ರಾಮಾಣಿಕತೆ, ಪರಧರ್ಮ ಸಹಿಷ್ಣುತೆ, ಕತೃತ್ವಶಕ್ತಿ, ಔದಾರ್ಯ, ಪರೋಪಕಾರ, ಸಾಮಾಜಿಕ ಚಿಂತನೆ, ಸಾಹಿತ್ಯ ಪ್ರೇಮಿ ಈ ಎಲ್ಲಾ ಗುಣಗಳ ಮಹಾಸಂಗಮ ಡಾ. ಬಿ.ಡಿ. ಜತ್ತಿಯುವರು. ಬಸವಣ್ಣನವರ ಆದರ್ಶಗಳ ಮುಂಬೆಳಕಿನಲ್ಲಿ ತಮ್ಮ ಜೀವನವನ್ನು ರೂಪಿಸಿಕೊಂಡು ಅಂತರಂಗ, ಬಹಿರಂಗ ಗಳೆರಡರಲ್ಲಿ ಏಕತಾನತೆಯನ್ನು ಕಾಪಾಡಿಕೊಂಡು ಎಲ್ಲರಿಗೂ ಬೇಕಾದವರಾಗಿ ಬದುಕಿ ಇತರರಿಗೆ ಆದರ್ಶವಾದವರು. ಕರ್ನಾಟಕದ ಕೀರ್ತಿಯುನ್ನು ವಿಶ್ವವುಟ್ಟಕ್ಕೆ ಕೊಂಡೊಯ್ದು ಬಸವಣ್ಣನವರ ತತ್ತ್ವಾಭಿಮಾನಿಗಳು, 'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯುರಿಲ್ಲ' ಎಂಬ ಬಸವಣ್ಣನವರ ನುಡಿಯಂತೆ ಸಭ್ಯತೆ, ಸೌಜನ್ಯವನ್ನು ಜೀವನದಲ್ಲಿ ಅಳವಡಿಸಿಕೊಂಡವರು.



## ಜನನ :

ಬಿಜಾಪುರ ಜಿಲ್ಲೆ ಜಮಖಂಡಿ ಸಂಸ್ಥಾನಕ್ಕೆ ಸೇರಿದ ಸಾವಳಿಗೆ ಎಂಬ ಗ್ರಾಮದಲ್ಲಿ ಸೆಪ್ಟೆಂಬರ್ ೯, ೧೯೧೨ ರಂದು ಜನಿಸಿದರು. ಹಡೆದ ಪುಣ್ಯಜೀವಿಗಳು ತಂದೆ ಶರಣ ದಾನಪ್ಪ, ತಾಯಿ ಶರಣೆ ಭಾಗವ್ವ, ಕೃಷಿ ಕುಟುಂಬ. ತಂದೆಯವರು ಕೃಷಿಯ ಜೊತೆಗೆ ಜೀವನ ನಿರ್ವಹಣೆಗಾಗಿ ಒಂದು ಸಣ್ಣ ಕಿರಾಣಿ ಅಂಗಡಿಯನ್ನಿಟ್ಟುಕೊಂಡಿದ್ದರು. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ಬಸಪ್ಪ. ಬಸವಣ್ಣನವರಂತೆ ಮುಂದೆ ಬಸವಣ್ಣನವರ ಆದರ್ಶಗಳನ್ನು ಜೀವನ ಮೌಲ್ಯಗಳನ್ನು ಬೆಳೆಸಿಕೊಳ್ಳಲಿ ಎಂಬ ಸದಾಶಯ, ಅವರ ಆಶಯ ಹುಸಿಯಾಗಲಿಲ್ಲ. ಬಸವಣ್ಣನವರು ಬಾಲಕ ಬಸಪ್ಪ ಸತ್ಪಥದಲ್ಲಿ ನಡೆಯಲು ದಾರಿದೀಪವಾದರು.

ತಾಯಿ ಭಾಗವ್ವ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗುತ್ತಾ "ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು, ಮಾತಿನಲಿ ಚೂಡಾಮಣಿಯಾಗು - ನನ ಕಂದ, ಜ್ಯೋತಿಯೇ ಆಗು ಜಗಕ್ಕೆಲ್ಲ" ಎಂದು ಹಾಡುತ್ತಾ ಮಲಗಿಸುತ್ತಿದ್ದರು. ಮಾತೆಯ ಹೃದಯಾಳದಿಂದ ಬಂದ ಈ ಆಶಯದ ನುಡಿಗಳು ಅವರ ಬಾಳಿನಲ್ಲಿ ಬೆಳಕು ನೀಡಿತು. ಇಡೀ ವಿಶ್ವವೇ ಮೆಚ್ಚುವಂತೆ ಬದುಕುವಂತಾದರು. ತಾಯಿಯ ಆಶೀರ್ವಾದ ಫಲ ನೀಡಿತು. ತಂದೆ ದಾನಪ್ಪನವರು ದೈವಭಕ್ತರಾಗಿದ್ದರು. ಅದರಲ್ಲೂ ಅಥಣಿ ಶಿವಯೋಗಿಗಳ ಪರಮಭಕ್ತರಾಗಿದ್ದರು. ಒಮ್ಮೆ ಮಗುವಿನೊಂದಿಗೆ ಶಿವಯೋಗಿಗಳ ದರ್ಶನಕ್ಕೆ ಹೋದಾಗ, ಮಗುವಿನ ತುಂಟಾಟವನ್ನು ಪೂಜ್ಯ ಶಿವಯೋಗಿಗಳ ಮುಂದೆ ಪ್ರಸ್ತಾಪಿಸಿದಾಗ ಕೂಡಲೆ ಶಿವಯೋಗಿಗಳು 'ಹಾಗೆ ಹೇಳಬೇಡ ದಾನಪ್ಪ, ಮುಂದೆ ಅವನು ರಾಜನಾಗುತ್ತಾನೆ' ಎಂದು ಆಶೀರ್ವಾದಿಸಿದುದನ್ನು ತಂದೆ ಬಸಪ್ಪನವರು ಆಗಾಗ ಸ್ಮರಿಸಿಕೊಳ್ಳುತ್ತಿದ್ದರು. ಶಿವಯೋಗಿಗಳ ಆಶೀರ್ವಾದ ಹುಸಿಯಾಗುವುದುಂಟೆ! ಅವರು ದೈವಾಂಶ ಪುರುಷರು, ಪವಾಡ ಪುರುಷರು, ಅವರ ಆಶೀರ್ವಾದ ಹುಸಿಯಾಗಲಿಲ್ಲ. ಅವರು ಮುಂದೆ ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದ ಸರ್ವೋಚ್ಚ ಹುದ್ದೆಯನ್ನು ಅಲಂಕರಿಸಿ ಆ ಹುದ್ದೆಗೆ ಘನತೆ ಗೌರವವನ್ನು ತಂದು ಕೊಟ್ಟಿದ್ದು ಈಗ ಇತಿಹಾಸ.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧





## ಶಿಕ್ಷಣ :

ಹುಟ್ಟಿದೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ವಿಜಾಪುರದಲ್ಲಿ, ಪ್ರೌಢಶಿಕ್ಷಣವನ್ನು ಮುಗಿಸಿ ಕೊಲ್ಲಾಪುರದ ರಾಜಗುರು ಕಾಲೇಜಿನಲ್ಲಿ ಪದವಿ ಪಡೆದರು. ಮೊದಲನೆ ಎಂ.ಎ. ತರಗತಿಯಲ್ಲಿ ಓದುತ್ತಿದ್ದಾಗ ತಂದೆ ದಾನಪ್ಪನವರು ಅನಿರೀಕ್ಷಿತ ಮರಣದ ವಾರ್ತೆ ಬಸಪ್ಪನವರಿಗೆ ಬರಸಿಡಿಲೊಡೆದಂತಾಯಿತು. ತಾಯಿಯವರ ಆಶಯದಂತೆ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ ಮನೆತನದ ಜವಾಬ್ದಾರಿಯನ್ನು ಹೊರಬೇಕಾಯಿತು. ಸುಮಾರು ನಾಲ್ಕು ವರ್ಷಗಳ ಕಾಲ ಮನೆಯ ಜವಾಬ್ದಾರಿಯನ್ನು ವಹಿಸಿಕೊಂಡು ಮನೆಯನ್ನು ಸುಸ್ಥಿತಿಗೆ ತಂದ ಮೇಲೆ ತಂದೆಯವರ ಕನಸನ್ನು ನನಸು ಮಾಡಲು ಕೊಲ್ಲಾಪುರಕ್ಕೆ ಹೋಗಿ ೧೯೪೦ರಲ್ಲಿ ಎಲ್.ಎಲ್.ಬಿ. ಪರೀಕ್ಷೆಯನ್ನು ಮುಗಿಸಿದರು.

## ವಿವಾಹ :

ಶ್ರೀ ಬಸಪ್ಪನವರು ೫ನೇ ತರಗತಿ ಮುಗಿಸುವ ಹೊತ್ತಿಗೆ ಹಿರಿಯರೆಲ್ಲ ಸೇರಿ ಗೃಹಸ್ಥಾಶ್ರಮ ದೀಕ್ಷೆಯನ್ನು ಕೊಟ್ಟರು. ಆಗ ಬಸಪ್ಪನವರಿಗೆ ಹನ್ನೊಂದು ವರ್ಷ. ತಂದೆ ತಾಯಿಗಳು ವಿಧೇಯನಾಗಿದ್ದ ಬಸಪ್ಪನವರು ವಿವಾಹದ ಪ್ರಸ್ತಾಪವನ್ನು ಸಂತೋಷದಿಂದಲೇ ಒಪ್ಪಿಕೊಂಡರು. ಮದುವೆ ಎಂದರೆ ಏನು ಎಂದು ಅರಿಯದ ವಯಸ್ಸಿನಲ್ಲಿ ಬಸಪ್ಪನವರನ್ನು ಕೈಹಿಡಿದ ಭಾಗ್ಯವಂತೆ ಸಂಗಮ್ಮ. ಆಗ ಆಕೆಗೆ ಐದು ವರ್ಷ ವಯಸ್ಸು. ಬಾಲ್ಯ ವಿವಾಹ ಆಚರಣೆಯಲ್ಲಿದ್ದ ಕಾಲ. ಈ ಬಗ್ಗೆ ಯಾರೂ ಅಪಸ್ವರ ಎತ್ತಲಿಲ್ಲ. ಗ್ರಾಮದ ಜನರಿಗೆ ಹಿರಿಯರಿಗೆ ದಾನಪ್ಪ ಜತ್ತಿಯವರ ಮನೆತನದ ಬಗ್ಗೆ ಅಪಾರವಾದ ಗೌರವ ಪ್ರೀತಿಯಿತ್ತು. ಹಾಗಾಗಿ ಎಲ್ಲರೂ ಈ ಮದುವೆಯ ಸಡಗರದಲ್ಲಿ ಸಂತೋಷದಿಂದ ಭಾಗಿಯಾಗಿ ಪುಟಾಣಿ ವಧು-ವರರನ್ನು ಹೃತ್ಪೂರ್ವಕವಾಗಿ ಹಾರೈಸಿ ಆಶೀರ್ವದಿಸಿದರು. ಅವರೆಲ್ಲರ ಆಶೀರ್ವಾದ, ಹಾರೈಕೆ ಆ ನವದಂಪತಿಗಳಿಗೆ ಶ್ರೀರಕ್ಷೆಯಾಯಿತು. ಮನೆಯಲ್ಲಿನ ಕೆಲವರಿಗೆ ಹೆಚ್ಚು ವರದಕ್ಷಿಣೆ ಬರುವಂತಹ ಕಡೆ ಹೆಣ್ಣು ತರಬೇಕೆಂಬ ಆಸೆಗೆ ತಂದೆ ದಾನಪ್ಪ ಅವರು ನೀರೆರೆಯಲಿಲ್ಲ. ಅವರ ದೃಷ್ಟಿಯೇ ಬೇರೆಯ ಆಗಿತ್ತು. ಹಣಕ್ಕಿಂತ ಗುಣ ಮುಖ್ಯವಾದುದ್ದರಿಂದ ಆದರ್ಶ ಮನೆತನದ ಹೆಣ್ಣು ತಂದು ಮನೆ ತುಂಬಿಸಿಕೊಳ್ಳಬೇಕೆಂಬುದಾಗಿತ್ತು. ಹಾಗಾಗಿ ಸದ್ಗುಣವಂತೆ ಸಂಗಮ್ಮನವರು ಸೊಸೆಯಾಗಿ ಅವರ ಮನೆ ಮನ ತುಂಬಿದರು.

## ವಕೀಲ ವೃತ್ತಿ - ರಾಜಕೀಯ ಕ್ಷೇತ್ರ :

ತಾಯಿಯವರ ಆಶಯದಂತೆ ತಮ್ಮ ಹುಟ್ಟೂರಿಗೆ ಸಮೀಪವಿದ್ದ ಜಮಖಂಡಿಯಲ್ಲೇ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು. ವೃತ್ತಿಯಲ್ಲಿದ್ದು ನಿಷ್ಠೆ, ಶ್ರದ್ಧೆ, ಬದ್ಧತೆಯಿಂದ ಬಹುಬೇಗ ಜನಪ್ರಿಯ ವಕೀಲರೆನಿಸಿಕೊಂಡರು. ಅವರು ಜನರೊಂದಿಗೆ ಮುಕ್ತವಾಗಿ ಬೆರೆಯುತ್ತಿದ್ದ ರೀತಿ, ಅವರ ಕಷ್ಟಗಳಿಗೆ ಸ್ಪಂದಿಸುವ ಗುಣ ಹಾಗೂ ಮಾನವೀಯತೆಯಿಂದ ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾದರು, ಜನರ ವಿಶ್ವಾಸಕ್ಕೆ ಕಟ್ಟುಬಿದ್ದು ಜಮಖಂಡಿಯ ಪುರಸಭಾ ಸದಸ್ಯರಾಗಿ ಆಯ್ಕೆಯಾದ ಶ್ರೀ ಜತ್ತಿಯವರು ಸರ್ವಾನುಮತದಿಂದ ಪುರಸಭಾ ಅಧ್ಯಕ್ಷರಾಗಿ ಸೇವೆ ಸಲ್ಲಿಸುವ ಸುಯೋಗ ಅವರದಾಯಿತು. ಮೂರು ವರ್ಷಗಳ ನಂತರ ಮತ್ತೆ ಪುನರಾಯ್ಕೆಯಾಗಿ ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದರು. ಆ ವೇಳೆಗಾಗಲೇ ಅವರೊಬ್ಬ ಪ್ರತಿಭಾವಂತ ನ್ಯಾಯವಾದಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಅವರಲ್ಲಿ ವಕೀಲ ವೃತ್ತಿಗೆ ಅವಶ್ಯಕವಾದ ಸೂಕ್ಷ್ಮತೆ, ದೀರ್ಘ ಅಧ್ಯಯನ, ಆತುರ ಪಡದೆ ನಿಧಾನವಾಗಿ ಕೇಸುಗಳ ಬಗ್ಗೆ ವಿಚಾರ ವಿಮರ್ಶೆ, ತರ್ಕಬದ್ಧವಾದ ವಾದಮಂಡನೆ, ಸಮರ್ಥವಾದ ರೀತಿಯಲ್ಲಿ ಎದುರಾಳಿಗಳೂ ತಲೆ ಬಾಗುವಂತೆ ಮಾಡುತ್ತಿದ್ದು ಪ್ರತಿಪಾದನೆ, ಸುಸಂಬಂಧವಾದ ನಿರ್ಣಯ, ಭಾಷಾ ಪ್ರಭುತ್ವಗಳು ಶ್ರೀ ಜತ್ತಿಯವರಲ್ಲಿ ಅಂತರ್ಗತವಾಗಿದ್ದವು. ಅವರಲಿದ್ದು ಒಂದು ವಿಶೇಷ ಗುಣವೆಂದರೆ ಬಡ ಕಕ್ಷಿದಾರರ ಮೇಲಿಟ್ಟ ಪ್ರೀತಿ, ಕಳಕಳಿ. ವಕೀಲರಿಗೆ ಹಣ ಕೊಡಲು ಶಕ್ತಿ ಇಲ್ಲದ ಬಡ ಜನರ ವಿವಾದಗಳನ್ನು ಪರಿಹರಿಸುವಲ್ಲಿ ಅವರು ತೋರುತ್ತಿದ್ದ ಕಾಳಜಿ, ಬದ್ಧತೆ ಅವರೊಳಗಿದ್ದ ಮಾನವೀಯತೆಗೆ ಒಂದು ಜ್ವಲಂತ ನಿದರ್ಶನ.

## ಸಾಹಿತ್ಯದ ಬಗ್ಗೆ ಒಲವು :

ವಿದ್ಯಾರ್ಥಿ ದೆಸೆಯಿಂದಲೇ ಅವರಲ್ಲಿನ ಸಾಹಿತ್ಯ ಪ್ರೀತಿ ತಮಗರಿವಿಲ್ಲದೆಯೇ ಬೆಳೆಯ ತೊಡಗಿತು. ವಿದ್ಯಾರ್ಥಿಗಳ ಸಂಘ ಕಟ್ಟಿ 'ಬಸವ ಬಳಗ' ಹೆಸರಿನಲ್ಲಿ ತಮ್ಮ ಬಿಡುವಿನ ವೇಳೆಯಲ್ಲಿ ಚರ್ಚೆ ಮಾಡಲು ಅವಕಾಶ ಕಲ್ಪಿಸಿಕೊಡುತ್ತಿದ್ದರು. ಆ ವೇಳೆಗಾಗಲೇ ಅವರಿಗೆ 'ಬಸವ' ಎಂಬ ಹೆಸರು ಅವರಿಗೆ ನಿತ್ಯ ತಾರಕ ಮಂತ್ರವಾಗಿತ್ತು. ಅವರ ದೈನಂದಿನ ಬದುಕಿಗೆ ಸ್ಫೂರ್ತಿಯಾಗಿತ್ತು. ಕಾಲೇಜಿನಲ್ಲಿ ತಮ್ಮ ಸಹಪಾಠಿಯಾಗಿದ್ದ ಡಾಂಗೆ ಎಂಬುವರ ಕವನಗಳನ್ನು 'ಹೂಗೊಂಚಲು' ಹೆಸರಿನಲ್ಲಿ ಕವನ ಸಂಕಲವನ್ನು ಪ್ರಕಟಿಸುವುದರ ಮೂಲಕ ಸಾಹಿತ್ಯದ ಮೇಲಿನ ಪ್ರೀತಿಯನ್ನು ವ್ಯಕ್ತಪಡಿಸಿದರು. ಕಾಲೇಜಿನಿಂದ ಪ್ರಕಟವಾಗುತ್ತಿದ್ದ 'ರಾಜಾ ರಾಮಿಯನ್' ಮಾಸಿಕ ಪತ್ರಿಕೆಗೆ ಕಥೆ, ಕವನ ಬರೆಯುತ್ತಿದ್ದರು. ಕಾಲೇಜಿನಲ್ಲಿ ಏರ್ಪಡಿಸಿದ್ದ ಅಂತರ ಕಾಲೇಜು ಚರ್ಚಾ ಸ್ಪರ್ಧೆಯಲ್ಲಿ 'ಕನ್ನಡಿಗರ ಏಳು ಬೀಳು' ಎಂಬ ವಿಷಯವನ್ನು ಕುರಿತು



ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರೊಂದಿಗೆ ಡಾ. ಬಿ.ಡಿ. ಜತ್ತಿಯವರು

ಅರ್ಥಪೂರ್ಣವಾಗಿ ಮಾತನಾಡಿ ಪ್ರಥಮ ಸ್ಥಾನ ಪಡೆಯುವುದರ ಮೂಲಕ ಕಾಲೇಜಿಗೆ ಕೀರ್ತಿಯನ್ನು ತಂದುಕೊಟ್ಟರು. ಆಗಿನಿಂದಲೇ ಮಾತನಾಡುವ ಕಲೆಯನ್ನು ರೂಢಿಸಿಕೊಂಡಿದ್ದು, ವಕೀಲ ವೃತ್ತಿಯಲ್ಲಿ ಸಾಧನಾ ಪಥದಲ್ಲಿ ಮುನ್ನಡೆಯಲು ಸಾಧ್ಯವಾಯಿತು. ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಅವರಲ್ಲಿ ಮೊಳೆತ 'ಬಸವ ಬಳಗದ' ಪರಿಕಲ್ಪನೆ ಅವರು ಬೆಳೆದಂತೆ ಬೆಳೆಯುತ್ತಾ ಹೋಗಿ ಮುಂದೊಂದು ದಿನ 'ಬಸವ ಸಮಿತಿ'ಯನ್ನು ಸ್ಥಾಪಿಸಲು ಬೀಜಾಂಕುರವಾಯಿತು.

ಶ್ರೀ ಬಿ.ಡಿ. ಜತ್ತಿಯವರು ಬಹುಮುಖ ಪ್ರತಿಭಾ ಸಂಪನ್ನರಾಗಿದ್ದರು. ಚಾಣಾಕ್ಷ ರಾಜಕೀಯ ಮುತ್ಸದ್ಧಿ, ಶ್ರೇಷ್ಠ ಆಡಳಿತಗಾರರಾಗಿ ರಾಜ್ಯದ, ರಾಷ್ಟ್ರದ ಜನತೆಯ ಮನವನ್ನು ಗೆದ್ದ ವಿನಯಸಂಪನ್ನರಾಗಿದ್ದರು.

**ದಕ್ಷ ಆಡಳಿತಗಾರ :**

ಶ್ರೀ ಬಸಪ್ಪ ದಾನಪ್ಪ ಜತ್ತಿಯವರು ಕಿರಿಯದರಲ್ಲಿ ಹಿರಿಯದನ್ನು ಕಂಡವರು. ಅವರು ರಾಜಕೀಯದ ಮೆಟ್ಟಿಲುಗಳನ್ನು ಹಂತ ಹಂತವಾಗಿ ಏರುತ್ತಾ ಉನ್ನತವಾದ ಪದವಿಯನ್ನು ಪಡೆದವರು. ಅವರು ಸಾಧನೆಯ ಒಂದೊಂದು ಮೆಟ್ಟಿಲನ್ನು ಏರುವಾಗಲೂ ಹಿಂದಿನ ಮೆಟ್ಟಿಲನ್ನು ಮರೆಯಲಿಲ್ಲ. ಅವರಲ್ಲಿನ ಸಭ್ಯತೆಯಿಂದ ಕೂಡಿದ ಕೃತಜ್ಞತೆ ರಾಷ್ಟ್ರದ ಉನ್ನತ ಸ್ಥಾನದವರೆಗೂ ಕ್ರಮಿಸಲು ಸಾಧ್ಯವಾಯಿತು. ಜಮಖಂಡಿಯ ಸಂಸ್ಥಾನದಲ್ಲಿ ಪ್ರಜಾಪರಿಷತ್ತಿನ ಕಾರ್ಯದರ್ಶಿಯಾಗಿ ನಂತರ ಸಂಸ್ಥೆಯ ಮುಖಂಡರ ಸಲಹೆ ಹಾಗೂ ಒತ್ತಾಯಸದ ಮೇಲೆ ಸಾವಳಗಿ ಕ್ಷೇತ್ರದಿಂದ ಸ್ಪರ್ಧಿಸಿ ಜಯಶೀಲರಾಗಿ ಮಂತ್ರಿಗಳಾಗಿ ನಂತರದ ದಿನಗಳಲ್ಲಿ ಮುಖ್ಯಮಂತ್ರಿಯಾಗಿ ಸೇವೆ ಮಾಡುವ ಸದಾವಕಾಶ ದೊರೆಯಿತು. ಇದರಿಂದ ತಮ್ಮ ಬದುಕನ್ನು ಸಾರ್ವಜನಿಕ ಸೇವೆಗೆ ಮುಡುಪಾಗಿಟ್ಟು ಅಧಿಕಾರವನ್ನು ಅರ್ಥಪೂರ್ಣವಾಗಿ ಬಳಸಿಕೊಂಡರು.

**ಜನಪಯೋಗಿ ಕಾರ್ಯಗಳು :**

ಜಮಖಂಡಿಯ ಕ್ಷೇತ್ರದಿಂದ ಸ್ಪರ್ಧಿಸಿ ವಿಧಾನಸಭೆಗೆ ಆಯ್ಕೆಯಾಗಿ ಮುರಾಜಿದೇಸಾಯಿಯವರ ಸಂಪುಟದಲ್ಲಿ ಆರೋಗ್ಯ ಉಪಮಂತ್ರಿಯಾಗಿ ನೇಮಕಗೊಂಡರು, ಅವರ ಅಧಿಕಾರಾವಧಿಯಲ್ಲಿ ಹುಬ್ಬಳ್ಳಿ ಹಾಗೂ ಮಣಿಪಾಲ್‌ನಲ್ಲಿ ವೈದ್ಯಕೀಯ ಕಾಲೇಜು ಸ್ಥಾಪನೆಗೆ ಅಗತ್ಯವಾದ ಕ್ರಮಗಳನ್ನು ಕೈಗೊಂಡರು. ಬಿಜಾಪುರ ಸಿದ್ದೇಶ್ವರ ಪ್ರೌಢಶಾಲೆಯನ್ನು ಅನುದಾನಕ್ಕೆ ಒಳಪಡಿಸಿದರು. ಭಾಷಾವಾರು ರಾಜ್ಯ ಪುನರ್ ವಿಂಗಡನೆಯಾಗಿ ನವೆಂಬರ ೧, ೧೯೫೬ ರಂದು ಕರ್ನಾಟಕ ರಾಜ್ಯ ಉದಯವಾಗಲು ಅವರು ವಹಿಸಿದ ಪಾತ್ರ ಗಮನಾರ್ಹವಾದುದು. ಆ ಸಂದರ್ಭದಲ್ಲಿ ಮುಂಬೈ ಪ್ರಾಂತ್ಯಕ್ಕೆ ಒಳಪಟ್ಟಿದ್ದ ಬೆಳಗಾವಿ, ವಿಜಾಪುರ, ಧಾರವಾಡ ಹಾಗೂ ಕಾರವಾರ ಜಿಲ್ಲೆಗಳು ಕರ್ನಾಟಕಕ್ಕೆ ಸೇರ್ಪಡೆಯಾದವು. ೧೯೫೮ ರಿಂದ ೧೯೬೨ ರವರೆಗೆ ಕರ್ನಾಟಕದ ಮುಖ್ಯಮಂತ್ರಿಯಾಗಿ ಅವರು ಮಾಡಿದ ಸಾಧನೆ ಸ್ತುತ್ಯಾರ್ಹವಾದವು. ಬಸವಣ್ಣನವರ ಆದರ್ಶಗಳನ್ನು, ಜೀವನ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಜನ ಸೇವೆಗಾಗಿ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು, ಕರ್ನಾಟಕದಲ್ಲಿ ಕೈಗಾರಿಕಾ ಕ್ರಾಂತಿಗೆ ನಾಂದಿ ಹಾಡಿದರು. ಹುಬ್ಬಳ್ಳಿ, ಧಾರವಾಡ ನಗರಪಾಲಿಕೆ ರಚನೆ, ಮಂಗಳೂರಿನಲ್ಲಿ ಬಂದು ಅಭಿವೃದ್ಧಿ, ಗುಲ್ಬರ್ಗಾ, ಭದ್ರಾವತಿಯಲ್ಲಿ ಆಕಾಶವಾಣಿ ಕೇಂದ್ರಗಳ ಸ್ಥಾಪನೆ, ಬೆಂಗಳೂರಿನಲ್ಲಿ ಕೈಗಡಿಯಾರ ಕಾರ್ಖಾನೆ, ಇವುಗಳ ಜೊತೆಗೆ ಅನೇಕ ನೀರಾವರಿ ಯೋಜನೆಗಳಿಗೆ ಚಾಲನೆ ನೀಡಿ ತಮಗೆ ದೊರೆತ ಅಧಿಕಾರವನ್ನು ಜನ ಮೆಚ್ಚುವಂತೆ ಸದುಪಯೋಗ ಗೊಳಿಸಿದರು. ನಂತರದ ದಿನಗಳಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರ ಮಂತ್ರಿ ಮಂಡಳದಲ್ಲಿ ಹಣಕಾಸು ಮಂತ್ರಿಯಾಗಿ, ಆಹಾರ ಮಂತ್ರಿಯಾಗಿ, ಅಮೂಲಾಗ್ರ ಬದಲಾವಣೆ ಮಾಡುವುದರ ಮೂಲಕ ಆಯಾ ಸ್ಥಾನಗಳಿಗೆ ಘನತೆ ಗೌರವವನ್ನು ತಂದುಕೊಟ್ಟ ಹೆಗ್ಗಳಿಕೆಗೆ ಪಾತ್ರರಾದರು.

ಭಾರತ ರತ್ನ ಸರ್. ಎಂ. ವಿಶ್ವೇಶ್ವರಯ್ಯನವರೊಂದಿಗೆ ಡಾ. ಬಿ.ಡಿ. ಜತ್ತಿಯವರು





ಪ್ರಧಾನಮಂತ್ರಿಯಾಗಿ ಶ್ರೀ ಮುರಾರ್ಜಿ ದೇಸಾಯಿಯವರು ಪ್ರಮಾಣ ವಚನ ಸ್ವೀಕಾರ

**ಲೆಫ್ಟಿನೆಂಟ ಗೌರ್‍ನರ್ :**

ರಾಜಕೀಯ ಕ್ಷೇತ್ರದಲ್ಲಿ ತಮ್ಮದೇ ವರ್ಚಸ್ಸನ್ನು ಬೀರಿದ್ದ, ಅಪಾರವಾದ ಅನುಭವದ ಗಣಿಯಾಗಿದ್ದ ಶ್ರೀ ಬಿ.ಡಿ. ಜತ್ತಿಯವರಿಗೆ ೧೯೬೮ರಲ್ಲಿ ಪಾಂಡಿಚೇರಿಯ ಲೆಫ್ಟಿನೆಂಟ್ ಗೌರ್‍ನರ ಆಗಿ ನೇಮಕ ಮಾಡಿ ಕೇಂದ್ರ ಸರ್ಕಾರ ತನ್ನ ಬದ್ಧತೆಯನ್ನು ಪ್ರದರ್ಶಿಸಿತು. ಪಾಂಡಿಚೇರಿಯಲ್ಲಿ ಮಹರ್ಷಿ ಅರವಿಂದರ ಸಾನ್ನಿಧ್ಯ ದೊರೆತು, ಅರವಿಂದರ ಪೂರ್ಣ ಯೋಗದ ದಿವ್ಯಾನುಭವ ಪಡೆದರು. ನಾಲ್ಕು ವರ್ಷಗಳ ಕಾಲ ಆ ಹುದ್ದೆಯನ್ನು ಹಗರಣಗಳಿಗೆ ಒಳಗಾಗದೆ ಯಶಸ್ವಿಯಾಗಿ ನಿರ್ವಹಿಸಿ ಆ ಹುದ್ದೆಯ ಘನತೆ ಗೌರವವನ್ನು ಕಾಪಾಡಿದರು. ನ್ಯಾಯ ನಿಷ್ಠುರಿ, ನ್ಯಾಯ ಪಕ್ಷಪಾತಿ ಎಂಬ ಪ್ರೀತಿ ಗೌರವಕ್ಕೆ ಪಾತ್ರರಾದರು.

ಒರಿಸ್ಸಾ ರಾಜ್ಯದಲ್ಲಿ ರಾಜಕೀಯ ಅನಿಶ್ಚಿತತೆ ಉಂಟಾದಾಗ ಕೇಂದ್ರ ಸರ್ಕಾರ ೧೯೭೨ ರಲ್ಲಿ ಒರಿಸ್ಸಾ ರಾಜ್ಯಪಾಲರಾಗಿ ನೇಮಕ ಮಾಡಿದುದು ಶ್ರೀ ಬಿ.ಡಿ. ಜತ್ತಿ ಅವರ ಕಾರ್ಯ ತತ್ಪರತೆಗೆ, ಸೇವಾ ನಿಷ್ಠೆಗೆ ಸಂದ ಗೌರವ.

**ಆದರ್ಶ ದಾಂಪತ್ಯ :**

ಶ್ರೀ ಬಿ.ಡಿ. ಜತ್ತಿ ಮತ್ತು ಶ್ರೀಮತಿ ಸಂಗಮ್ಮನವರದು ಆದರ್ಶ ಸಂಸಾರ. ಹಾಲಿಗೆ ಜೇನು ಬೆರತಂತೆ ಸುಮಧುರವಾಗಿತ್ತು. ಶ್ರೀ ಜತ್ತಿಯವರ ಸಾಧನೆಗೆ ಸ್ಫೂರ್ತಿಯ ಸೆಲೆಯಾಗಿ ಪ್ರೇರಕ ಶಕ್ತಿಯಾಗಿದ್ದರು. ಬೇರೆಯವರು ಹೊಟ್ಟೆ ಕಿಚ್ಚುಪಡುವಂತಹ ದಾಂಪತ್ಯ ಜೀವನ. ಶ್ರೀಮತಿ ಸಂಗಮ್ಮನವರು ಆದರ್ಶ ಗೃಹಣಿಗೆ ಇರಬೇಕಾದ ಎಲ್ಲಾ ಗುಣಗಳನ್ನು ಹೊಂದಿದ್ದರು. ಕೊನೆಯವರೆಗೂ ಅವರ ಹತ್ತಿರ 'ಅಹಂ' ಸುಳಿಯಲೇ ಇಲ್ಲ. ರಾಷ್ಟ್ರದ ಸರ್ವೋನ್ನತ ಹುದ್ದೆಯಲ್ಲಿ ತಮ್ಮ ಪತಿಯಿದ್ದರೂ ಅವರೆಂದೂ ಜಂಭ ತೋರಿದವರಲ್ಲ. ಅವರದು ಸತಿಪತಿಗಳೊಂದಾದ ಅಪರೂಪದ ಜೋಡಿ. ಶ್ರೀಮತಿ ಸಂಗಮ್ಮನವರು ತುಂಬಾ ದೈವಭಕ್ತರಾಗಿದ್ದರು. ಗುರು ಹಿರಿಯರಲ್ಲಿ, ಅತಿಥಿ ಅಭ್ಯಾಗತರಲ್ಲಿ ದೇವರನ್ನು ಕಾಣುತ್ತಿದ್ದ ಮಹಾಸಾಧ್ವಿ. ಸತಿಪತಿಗಳಿಬ್ಬರಿಗೂ ಬಸವಣ್ಣನವರು ಆರಾಧ್ಯ ದೈವ. ತಮ್ಮ ಎಲ್ಲಾ ಆಗು ಹೋಗುಗಳಿಗೂ ಬಸವಣ್ಣನವರೇ ಕಾರಣ ಎಂದು ದೃಢವಾಗಿ ನಂಬಿದ್ದರು.

**ನನಸಾದ ಕನಸು :**

ಒಮ್ಮೆ ಹೀಗಾಯಿತು. ಒಂದು ರಾತ್ರಿ ಶ್ರೀ ಜತ್ತಿಯವರ ಮನೆಯ ಪೂಜಾ ಕೊಠಡಿಯಲ್ಲಿಟ್ಟಿದ್ದ ಭಾವಚಿತ್ರದಿಂದ ಬಸವಣ್ಣನವರು ಪ್ರತ್ಯಕ್ಷವಾಗಿ ಹೊರಬಂದು ಮನೆಯ

ಆತ್ಮೀಯ ಕ್ಷಣಗಳಲ್ಲಿ ರಾಷ್ಟ್ರಪತಿ ಶ್ರೀ ನೀಲಂ ಸಂಜೀವರೆಡ್ಡಿ, ಪ್ರಧಾನಮಂತ್ರಿ ಶ್ರೀ ಮುರಾರ್ಜಿ ದೇಸಾಯಿ ಹಾಗೂ ಉಪರಾಷ್ಟ್ರಪತಿ ಡಾ. ಬಿ.ಡಿ. ಜತ್ತಿಯವರು

ಹೊರಕ್ಕೆ ಧಾವಿಸಿದರು. ಶ್ರೀಮತಿ ಸಂಗಮ್ಮನವರು ಅದನ್ನು ಕಂಡು 'ಎಲ್ಲಿಗೆ ಹೋಗುತ್ತಿದ್ದೀರಿ ಗುರುವೇ ?" ಎಂದು ಕೇಳಿದಾಗ ಮೌನದಿಂದಲೇ ಆ ದಿವ್ಯಮೂರ್ತಿ ಹೊರಗಿನ ಕಾಂಪೌಂಡಿನತ್ತ ಹೊರಟಿತು. ಆಗ ಸಂಗಮ್ಮನವರು 'ದಯವಿಟ್ಟು ಹೋಗಬೇಡಿ' ಎಂದು ವಿನಮ್ರತೆಯಿಂದ ಪ್ರಾರ್ಥಿಸಿದರು. 'ಚಿಂತಿಸಬೇಡ, ಮತ್ತೆ ಹಿಂದಿರುಗುವೆ' ಎಂದು ಹೇಳಿ ಹೋದ ಆ ವ್ಯೋಮಮೂರ್ತಿ ಸ್ವಲ್ಪ ಹೊತ್ತಿನಲ್ಲೇ ಹಿಂತಿರುಗಿ ಬಂದು, ಸಂಗಮ್ಮನವರನ್ನು ಕುರಿತು "ನಿನಗೂ ಮತ್ತು ನಿನ್ನ ಪತಿಗೂ ಬೇರೊಂದು ಸ್ಥಳ ನೋಡಿ ಬಂದಿದ್ದೇವೆ. ನೀವು ಅಲ್ಲಿಗೆ ಹೋಗಬೇಕಾಗುತ್ತದೆ ಎಂದು ಹೇಳಿ ಕಣ್ಮರೆಯಾಯಿತು. ಇದು ಶ್ರೀಮತಿ ಸಂಗಮ್ಮನವರು ಬೆಂಗಳೂರಿನ ಮನೆಯಲ್ಲಿ ಕಂಡ ಕನಸು. ಆ ಕನಸು ನನಸಾಯಿತು. ಕೆಲವೇ ದಿನಗಳಲ್ಲಿ ಶ್ರೀ ಜತ್ತಿಯವರು ಪಾಂಡಿಚೇರಿಗೆ ಲೆಫ್ಟಿನೆಂಟ್ ಗೌರ್‍ನರಾಗಿ ನೇಮಕಗೊಂಡರು. ಒಳ್ಳೆಯ ಮನಸ್ಸಿದ್ದವರಿಗೆ ಒಳ್ಳೆಯದೇ ಆಗುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ.

**ಹಂಗಾಮಿ ರಾಷ್ಟ್ರಪತಿ :**

ರಾಷ್ಟ್ರಪತಿಯಾಗಿದ್ದ ಫಕ್ರುದ್ದಿನ ಆಲಿ ಆಹ್ಮದರು ಅನಿರೀಕ್ಷಿತವಾಗಿ ನಿಧನರಾದರು. ಫೆಬ್ರವರಿ ೨, ೧೯೭೭ ರಂದು ಹಂಗಾಮಿ ರಾಷ್ಟ್ರಪತಿಗಳಾಗಿ ಅಧಿಕಾರವನ್ನು ವಹಿಸಿಕೊಂಡು ರಾಷ್ಟ್ರವನ್ನು ಮುನ್ನಡೆಸಿದರು. ಮುಂದೆ ನೀಲಂ ಸಂಜೀವರೆಡ್ಡಿಯವರು ರಾಷ್ಟ್ರಪತಿಗಳಾಗಿದ್ದ ಸಂದರ್ಭದಲ್ಲಿ ಅನಾರೋಗ್ಯಕ್ಕೆ ತುತ್ತಾಗಿ ಚಿಕಿತ್ಸೆಗಾಗಿ ಅಮೇರಿಕಕ್ಕೆ ಹೋದಾಗ ಪುನಃ ಹಂಗಾಮಿ ರಾಷ್ಟ್ರಪತಿಗಳಾಗಿ ಕಾರ್ಯನಿರ್ವಹಿಸಿದರು.

ಶ್ರೀ ಬಿ.ಡಿ. ಜತ್ತಿಯವರು ಎಂದೂ ಅಧಿಕಾರ ಕೀರ್ತಿಗೆ ಆಸೆಪಟ್ಟವರಲ್ಲ. ಅಧಿಕಾರ, ಕೀರ್ತಿ, ಪ್ರಶಸ್ತಿ, ಗೌರವಗಳು ಅವರ ಬೆನ್ನಟ್ಟಿ ಬಂದವು. ರಾಷ್ಟ್ರದ ಮೂರು ವಿಶ್ವವಿದ್ಯಾನಿಲಯಗಳಾದ ಧಾರವಾಡ ವಿಶ್ವವಿದ್ಯಾಲಯ ೧೯೭೪ರಲ್ಲಿ ಗೌರವ ಡಾಕ್ಟರೇಟ್ ನೀಡಿ ಧನ್ಯತೆಯನ್ನು ಪಡೆದರೆ, ೧೯೭೬ರಲ್ಲಿ ಗುರುನಾನಕ್ ವಿಶ್ವವಿದ್ಯಾಲಯ ಹಾಗೂ ೧೯೭೭ರಲ್ಲಿ ಬೆಹ್ರಾಮಪುರ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ಗೌರವಿಸಿದರು.

**ಅಭಿಮಾನಧನರು :**

ಡಾ. ಬಿ.ಡಿ. ಜತ್ತಿಯವರು ತಮ್ಮ ಕೊನೆಯುಸಿರು ಇರುವವರೆಗೂ ತಾವು ನಂಬಿದ ಧರ್ಮ, ಸಂಸ್ಕೃತಿ, ಸಂಪ್ರದಾಯವನ್ನು ಬಿಟ್ಟವರಲ್ಲ. ಅಧಿಕಾರ ಬೇಕಾದರೇ ಬಿಟ್ಟೇನು, ತಮ್ಮ ಜೀವನದ ಅಂಗವಾಗಿದ್ದ ಧರ್ಮ, ಸಂಸ್ಕೃತಿಯನ್ನು ಬಿಡುವುದಿಲ್ಲ ಎಂದು ಯಾವುದೇ ಮುಜುಗರವಿಲ್ಲದೇ ಧೈರ್ಯವಾಗಿ ಹೇಳಿದವರು. ಜನಪದರು ಹೇಳುವಂತೆ "ಕರುಣೆ ಬಂದರೆ ಕಾಯೋ, ಮರಣ ಬಂದರೆ ಒಯ್ಯೋ – ಕರುಣೆ ಕಲ್ಯಾಣ ಬಸವಣ್ಣ ಕಡೆತನಕ ಕಾಯೋ ಅಭಿಮಾನ" ಎಂದು ಬಸವಣ್ಣನವರಲ್ಲಿ ಭಕ್ತಿಯಿಂದ ಪ್ರಾರ್ಥಿಸಿದ ಶ್ರೀ ಬಿ.ಡಿ. ಜತ್ತಿಯವರು ಇತರರಿಗೆ ಅನುಕರಣೀಯ.

ಹಿರಿಯ ಸಾಹಿತಿಗಳಾದ ಶ್ರೀ ಅನ್ನದಾನಯ್ಯ ಪುರಾಣಿಕ ಅವರು ಹೇಳಿರುವಂತೆ "ಶ್ರೀ ಜತ್ತಿಯವರು ಧರ್ಮ ನಿಷ್ಠರು, ಭಕ್ತಿ ಸಂಪನ್ನರು, ಮೃದು ವಚನಗಳೇ ಅವರ ಜಪ ತಪಗಳು; ಸದುವಿನಯವೇ ಸದಾಶಿವನೊಲಿಸಲು ಅವರು ಕೈಗೊಂಡ ಮಾರ್ಗ. ಅವರು ಶಿವಪೂಜಾ ಪರಾಯಣರು. ಗುರು ಲಿಂಗ ಜಂಗಮ ಭಕ್ತರು. ಈ ಭಕ್ತನ ನೊಸಲಿಗೆ ವಿಭೂತಿಯೇ ಶೃಂಗಾರ. ಅಂಗದ ಮೇಲೆ ಲಿಂಗವಿರುವರೆಲ್ಲ ಅವರಿಗೆ ಸಂಗಮ ಸ್ವರೂಪಿಗಳು. ಯಾವ ಧರ್ಮದ ಗುರುವೇ ಬರಲಿ ಅವರಿಗೆ ಶ್ರೀ ಜತ್ತಿಯವರು ತಲೆ ಬಾಗುತ್ತಾರೆ. ಅವರು ಸರ್ವಧರ್ಮ ನಿಷ್ಠರು; ಪರಧರ್ಮ; ಸಹಿಷ್ಣುಗಳು, ಶಿವನಲ್ಲಿ ಅವರಿಗೆ ಅಚಲವಾದ ಭಕ್ತಿ; ಅದುವೇ ಅವರ ಆತ್ಮೀಯ ಶಕ್ತಿ, ಅವರು "ಮುಗಿದ ಕೈ ಬಾಗಿದ ತಲೆ'ಯ ವ್ಯಕ್ತಿ. ಜನಸಾಮಾನ್ಯನಿಗೂ ಶ್ರೀ ಜತ್ತಿಯವರಿಗೂ ಬಿಡಲಾರದ ನಂಟು. ಯಾರು ಬೇಕಾದರೂ ಅವರನ್ನು ಕಾಣಬಹುದು; ಮಾತನಾಡಬಹುದು ಎಲ್ಲರಿಗೂ ಅವರ ಮನೆಯ ಮಹಾದ್ವಾರ ಮುಕ್ತ, ಆಡಂಬರದ ಸುಳಿವು ಅಹಂಕಾರದ ಹೊಳವು ಅಲ್ಲಿ ಹುಡುಕಿದರೂ ಸಿಕ್ಕವು. ಬಸವ ತತ್ತ್ವಗಳ ಮೂಸೆಯಲ್ಲಿ ಕರಗಿ ಮನದ ಕಾಳಿಕೆಯ ಕಳೆಯ ಕೊಂಡಿರುವ ಶ್ರೀ ಜತ್ತಿಯವರಿಗೆ ಶ್ರೀ ಅರವಿಂದಾಶ್ರಮದ ಶ್ರೀ ಮಾತಾಜಿಯವರ ಕರುಣೆಯ ಶ್ರೀಗಂಧ ಸ್ಥಾನವಾಗಿದೆ". ಅವರ ಮಾತುಗಳು ಶ್ರೀ ಜತ್ತಿಯವರ ಘನವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿವೆ. ಶ್ರೀ ಬಿ.ಡಿ. ಜತ್ತಿಯವರಿಗೂ, ಶ್ರೀ ಸಿದ್ಧಗಂಗಾ ಮಠಕ್ಕೂ ಅವಿನಾಭಾವ ಸಂಬಂಧ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಅನನ್ಯ ಭಕ್ತಿಯನ್ನಿಟ್ಟುಕೊಂಡು ಕೊನೆತನಕ ನಡೆದುಕೊಂಡರು.

**ಬಸವ ಸಮಿತಿ :**

ಡಾ. ಬಿ.ಡಿ. ಜತ್ತಿಯವರಿಗೆ ಬಸವಣ್ಣನವರು ಆದರ್ಶ ವ್ಯಕ್ತಿ. ಅವರು ತಮ್ಮ ಜೀವನವನ್ನು ಬಸವಣ್ಣನವರ ತತ್ತ್ವಗಳ ಚಿಂತನೆಗಾಗಿ ಮುಡುಪಾಗಿಟ್ಟಿರು. ಬಸವ ಸಮಿತಿ ಸ್ಥಾಪನೆ ಅವರ ಕಲ್ಪನೆಯ ಕೂಸು. ಹಲವರು ಸಮಾನ ಮನಸ್ಕರ







ಶರಣಾಭಿಮಾನಿಗಳ ಸಾರ್ವಭೌಮ ಸಂಸ್ಥೆ – ಬಸವ ಸಮಿತಿ

ಸಹಕಾರದೊಂದಿಗೆ ೧೯೬೪ ರಲ್ಲಿ ಸ್ಥಾಪಿಸುವುದರ ಮೂಲಕ ತಮ್ಮ ಕನಸಿಗೆ ಸಾಕಾರ ರೂಪ ನೀಡಿದರು. ಬಸವಣ್ಣನವರ ಆದರ್ಶಗಳನ್ನು, ಮೌಲಿಕ ಚಿಂತನೆಗಳನ್ನು ಅನ್ಯಭಾಷಿಕರಿಗೂ ಪರಿಚಯ ಮಾಡಿಕೊಡಬೇಕೆನ್ನುವ ಆಶಯದಿಂದ ಬಸವಣ್ಣನವರ ೧೦೮ ಆಯ್ದ ವಚನಗಳನ್ನು ಸಂಸ್ಕೃತ, ಹಿಂದಿ, ಮರಾಠಿ, ತೆಲುಗು, ತಮಿಳು, ಉರ್ದು ಮತ್ತು ಇಂಗ್ಲೀಷ್ ಭಾಷೆಗೆ ಅನುವಾದ ಮಾಡಿಸಿ ಸಹಸ್ರ ಸಂಖ್ಯೆಗಳಲ್ಲಿ ಪ್ರಕಟಿಸಿದ ಶ್ರೀ ಜತ್ತಿಯವರ ದೂರದೃಷ್ಟಿ ಮಹತ್ವವಾದುದು. ಶ್ರೀ ಬಸವಣ್ಣನವರ ೮ನೆಯ ಶತಮಾನೋತ್ಸವವನ್ನು ದೇಶದ್ಯಂತ ಆಚರಣೆ ಮಾಡಲು ಕಾರಣರಾದ ಶ್ರೀ ಜತ್ತಿಯವರು ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾದರು. ಬಸವಣ್ಣನವರು ಮತ್ತು ಅವರ ಸಮಕಾಲೀನ ಶರಣರ ಬಗ್ಗೆ ಗ್ರಂಥಗಳ ಪ್ರಕಟಣೆ ಬಸವ ಭವನದ ನಿರ್ಮಾಣ, ಅನುಭವ ಮಂಟಪದ ರಚನೆ, ಗ್ರಂಥ ಭಂಡಾರ, ವಾಚನಾಲಯ ಪ್ರಾರಂಭ, ವಿದೇಶಿ ಭಾಷೆಗಳ ಅಧ್ಯಯನ ಕೇಂದ್ರದ ಸ್ಥಾಪನೆ, ಸಾಹಿತ್ಯ, ಸಂಸ್ಕೃತಿ, ಧರ್ಮ ಮತ್ತು



ದೆಹಲಿಯಲ್ಲಿ ನಡೆದ ಬಸವ ಜಯಂತಿ ಕಾರ್ಯಕ್ರಮದಲ್ಲಿ ಪ್ರಧಾನ ಮಂತ್ರಿ ಶ್ರೀ ನರೇಂದ್ರ ಮೋದಿಯವರಿಂದ ಬಸವಣ್ಣನವರ ಪುತ್ಥಳಿಗೆ ಗೌರವ ಸಮರ್ಪಣೆ

ಕಲೆಗಳ ಬಗ್ಗೆ ಕಾರ್ಯಕ್ರಮಗಳ ಆಯೋಜನೆ, ಇವು ಬಸವ ಸಮಿತಿ ಶ್ರೀ ಬಿ.ಡಿ. ಜತ್ತಿಯವರ ನೇತೃತ್ವದಲ್ಲಿ ಕೈಗೊಂಡು, ಹಂತ ಹಂತವಾಗಿ ಅನುಷ್ಠಾನಗೊಳಿಸುತ್ತಾ ಬಂದಿದೆ. ಬಸವ ಸಮಿತಿ ಸ್ಥಾಪನೆಗೆ ನಿವೇಶನವನ್ನು ನೀಡಿ ಬಸವ ಭವನ ನಿರ್ಮಾಣಕ್ಕೆ ಪ್ರೇರಕ ಶಕ್ತಿಯಾಗಿ ನಿಂತವರು ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪ, ಅವರ ಕೊಡುಗೆಯನ್ನು ಮರೆಯುವಂತಿಲ್ಲ.

ಡಾ. ಬಿ.ಡಿ. ಜತ್ತಿಯವರು ೧೯೬೪ ರಿಂದ ೨೦೦೨ರ ವರೆಗೆ ಸಂಸ್ಥೆಯ ಅಧ್ಯಕ್ಷರಾಗಿ ಸಲ್ಲಿಸಿದ ಸೇವೆ ಅವಿಸ್ಮರಣೀಯ. ಅವರು ತಾವು ಕಂಡ ಕನಸನ್ನು ಸಾಕಾರಗೊಳಿಸಲು ಅವಿಶ್ರಾಂತವಾಗಿ ದುಡಿದರು, ಶಿರಣಾಭಿಮಾನಿಗಳ ಒಂದು ಪ್ರಾತಿನಿಧಿಕ ಸಂಸ್ಥೆಯನ್ನಾಗಿ ಮಾಡಲು ಪ್ರಾಮಾಣಿಕವಾಗಿ ತಮ್ಮನ್ನು ಅರ್ಪಿಸಿಕೊಂಡರು. ಡಾ. ಬಿ.ಡಿ. ಜತ್ತಿಯವರು ೯೦ ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ದಿನಾಂಕ ೭-೬-೨೦೦೨ ರಂದು ಬಸವ ಜ್ಯೋತಿಯಲ್ಲಿ ಲೀನವಾದರು.

ಶರಣ ಸಂಸ್ಕೃತಿಯ ಸಾಕಾರಮೂರ್ತಿಯಂತಿದ್ದ ಡಾ. ಬಿ.ಡಿ. ಜತ್ತಿಯವರು ತಮ್ಮ ಜೀವನದ ಒಂದೊಂದು ನಿಮಿಷಗಳನ್ನು ಲೋಕಕಲ್ಯಾಣಕ್ಕಾಗಿ ವಿನಿಯೋಗಿಸಿದರು. ಈ ಸಂದರ್ಭದಲ್ಲಿ ದಾರ್ಶನಿಕ ಕವಿ ಬರ್ನಾಡ್ ಷಾ ಅವರ ಕವನದ ಸಾಲುಗಳನ್ನು ಉಲ್ಲೇಖಿಸುವುದು ಔಚಿತ್ಯವೆನಿಸುತ್ತದೆ. ಅವರ ಕವನದ ಕನ್ನಡಾನುವಾದ ಹೀಗಿದೆ :

ನನ್ನ ಬದುಕು ಈ ಸಮಾಜಕ್ಕೆ ಸೇರಿದುದು
ನಾನು ಬದುಕಿರುವವರೆಗೂ ಈ ಸಮಾಜಕ್ಕಾಗಿ
ಸೇವೆ ಸಲ್ಲಿಸುವುದು ನನಗೆ ದೊರಕಿರುವ
ಒಂದು ಸದಾವಕಾಶ ಎಂದುಕೊಂಡಿದ್ದೇನೆ
ಮೃತ್ಯು ಆವರಿಸುವುದೊಳಗಾಗಿ
ಪರಿಪೂರ್ಣವಾಗಿ ಸಮಾಜ ಸೇವೆಗಾಗಿ
ನನ್ನನ್ನು ಸಮರ್ಪಿಸಿಕೊಳ್ಳಲು ಆಶಿಸುತ್ತೇನೆ
ನಾನು ಹೆಚ್ಚು ಸೇವೆ ಮಾಡಿದಷ್ಟು
ಹೆಚ್ಚು ಕಾಲ ಬದುಕುತ್ತೇನೆ
ಇದು ನನ್ನ ಬದುಕಿಗೆ
ಹೆಚ್ಚು ಸಂತಸವನ್ನು ತುಂಬುತ್ತದೆ
ಜೀವನ ನನಗೆ ಒಂದು ಹಣತೆಯ ಬೆಳಕಲ್ಲ
ಅದೊಂದು ಪ್ರಜ್ವಲ ಜ್ಯೋತಿ
ಆ ಜ್ಯೋತಿಯನ್ನು ಮುಂದಿನ ಪೀಳಿಗೆಗೆ
ಬಿಟ್ಟು ಹೋಗುವವರೆಗೂ ಅದನ್ನು



ನವದೆಹಲಿಯಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಕಾರ್ಯಕ್ರಮದಲ್ಲಿ ಬಸವ ಸಮಿತಿ ಹೊರತಂದ ಆಯ್ದ ೨೫೦೦ ಶರಣರ ವಚನಗಳ ೨೩ ಭಾಷೆಗಳ ಅನುವಾದ ಸಂಪುಟಗಳನ್ನು ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಲೋಕಾರ್ಪಣೆ ಮಾಡುತ್ತಿರುವುದು.

**ಎಷ್ಟು ಪ್ರಕಾಶಮಾನವಾಗಿ ಬೆಳಗಿಸಲು ಸಾಧ್ಯವೋ ಅಷ್ಟು ಪ್ರಕಾಶಮಾನವಾಗಿ ಬೆಳಗಿಸಲು ಪ್ರಯತ್ನಿಸುತ್ತೇನೆ.**

ಜಾರ್ಜ್ ಬರ್ನಾಡ್ ಷಾ ಅವರು ಡಾ. ಬಿ.ಡಿ. ಜತ್ತಿ ಅವರಂತಹ ಮಹನೀಯರನ್ನು ಕುರಿತೇ ಈ ಕವನ ಬರೆದಿರಬೇಕೆನಿಸುತ್ತದೆ. ಶ್ರೀ ಜತ್ತಿಯವರು ಕೊನೆ ಉಸಿರು ಇರುವವರೆಗೂ ಸಮಾಜದ ಒಳಿತಿಗಾಗಿ ತಮ್ಮನ್ನು ಅರ್ಪಿಸಿಕೊಂಡು ಮಹಾಶರಣರಾದರು.

ಡಾ. ಬಿ.ಡಿ. ಜತ್ತಿಯವರ ನಂತರ ಅಧ್ಯಕ್ಷರಾಗಿ ಜವಾಬ್ದಾರಿಯನ್ನು ವಹಿಸಿಕೊಂಡ ಅವರ ಸುಪುತ್ರ ಶ್ರೀ ಅರವಿಂದ ಜತ್ತಿಯವರು ಸಂಸ್ಥೆಯನ್ನು ಊಹಿಸಲಾರದಷ್ಟು ಎತ್ತರಕ್ಕೆ ಬೆಳೆಸುತ್ತಾ ಬಂದಿದ್ದಾರೆ. ಹಲವಾರು ಪ್ರಗತಿಪರ ಕಾರ್ಯ ಯೋಜನೆಗಳನ್ನು ರೂಪಿಸಿ ಸಮಿತಿಯ ಕಾರ್ಯಕಾರಿ ಸಮಿತಿ ಹಾಗೂ ಸದಸ್ಯರ ಸಹಕಾರದಿಂದ ಇಡೀ ರಾಷ್ಟ್ರವೇ ಕೊಂಡಾಡುವುದರ ಮಟ್ಟಕ್ಕೆ ಬೆಳೆಸಿದ್ದಾರೆ. ಬಸವಾದಿ ಶರಣರ ವಚನಗಳನ್ನು ವಿಶ್ವ ಮಟ್ಟದಲ್ಲಿ ಪ್ರಚಾರವಾಗುವಂತೆ ಮಾಡಿದ್ದಾರೆ. ಏಪ್ರಿಲ್ ೨೯ ರಂದು ಬಸವ ಜಯಂತಿಯ ಶುಭ ಸಂದರ್ಭದಲ್ಲಿ ರಾಷ್ಟ್ರದ ರಾಜಧಾನಿಯಲ್ಲಿ ೨೫೦೦ ಬಸವಾದಿ ಶರಣರ ವಚನಗಳನ್ನು ೨೩ ಭಾಷೆಗಳಿಗೆ ಅನುವಾದ ಮಾಡಿ ಪ್ರಧಾನ ಮಂತ್ರಿ ಶ್ರೀ ನರೇಂದ್ರ ಮೋದಿಯವರಿಂದ ಲೋಕಾರ್ಪಣೆ ಮಾಡಿಸಿದುದು ಬಸವ ಸಮಿತಿಯ ೫೭ ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ದಾಖಲಿಸುವಂತಹ ಸುಸಂದರ್ಭವನ್ನು ವಿಶ್ವವೇ ನೋಡಿ ಕಣ್ಮನಗಳನ್ನು ತುಂಬಿಸಿಕೊಂಡು ಧನ್ಯತೆಯನ್ನು ಪಡೆಯಿತು. ಬಸವ ಸಮಿತಿಯ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರು ಮಾಡಿದ ಪ್ರಾಸ್ತಾವಿಕ ನುಡಿಗಳು ಬಸವಣ್ಣನವರಿಗೆ ಸಲ್ಲಿಸಿದ ನುಡಿಗೌರವ ಕೋಟ್ಯಾಂತರ ಜನರ ಮೆಚ್ಚುಗೆಗೆ ಪಾತ್ರವಾಯಿತು. ಶರಣಾಭಿಮಾನಿಗಳ ಸಾರ್ವಭೌಮ ಸಂಸ್ಥೆಯಾದ ಬಸವ ಸಮಿತಿ ಶ್ರೀ ಅರವಿಂದ ಜತ್ತಿಯವರ ನೇತೃತ್ವದಲ್ಲಿ ಮತ್ತಷ್ಟು ಸಾಧನಾ ಪಥದಲ್ಲಿ ಮುನ್ನಡೆಯಲಿ ಎಂದು ಆಶಿಸುತ್ತೇನೆ.

ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಗೆಯವರಿಗೆ ಬಸವ ಸಮಿತಿ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರು ೨೫೦೦ ವಚನಗಳ ಹಿಂದಿ ಅನುವಾದ ಗ್ರಂಥವನ್ನು ನೀಡುತ್ತಿರುವುದು.







# ವಚನ ಸಾಹಿತ್ಯದಲ್ಲಿ ಅಕ್ಕಮ್ಮ ವಚನಗಳ ಮಹತ್ವ

– ಡಾ. ವಡ್ಡೆ ಹೇಮಲತಾ *

ಬಸವ ಪೂರ್ವ ಯುಗದಲ್ಲಿ ನಮ್ಮ ನಾಡಿನಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಜೀವನದಲ್ಲಿ ವೈಷಮ್ಯ ತಲೆದೋರಿತ್ತು. ಆ ಸಂದರ್ಭದಲ್ಲಿ ಭಾರತೀಯ ಮಹಿಳೆಯರ ಸ್ಥಿತಿ ತುಂಬಾ ಶೋಚನೀಯವಾಗಿತ್ತು. ಮಹಿಳೆ ದೇವರ ಪೂಜೆಗೆ ಅನರ್ಹಳು, ಶೂದ್ರರಲ್ಲಿ ಶೂದ್ರಳೆಂಬ ಭಾವನೆ ಸಮಾಜದಲ್ಲಿ ನೆಲೆಗೊಂಡಿತು. ಇಂಥ ಅವಹೇಳನಕ್ಕೆ, ಅಗೌರವಕ್ಕೆ ಗುರಿಯಾದ ಮಹಿಳೆಯರು ಈ ಸಮಾಜದಲ್ಲಿ ಧ್ವನಿಯಿಲ್ಲದವರಾಗಿ ಬದುಕು ಸಾಗಿಸುತ್ತಿದ್ದರು. ಅವರು ಕೀಳರಿಮೆಯನ್ನು ಮೈಗೂಡಿಸಿ ಕೊಂಡು, ಉಸಿರುಗಟ್ಟುವ ವಾತಾವರಣದಲ್ಲಿ ಜೀವಂತ ಶವವಾಗಿ ಜೀವಿಸತೊಡಗಿದ್ದಳು. ಈ ಸಂದರ್ಭದಲ್ಲಿ ಬಸವಾದಿ ಶರಣರು ಕೈಗೊಂಡ ಸಾಮಾಜಿಕ, ಧಾರ್ಮಿಕ ಕ್ರಾಂತಿಯ ಫಲವಾಗಿ ಮಹಿಳೆಯರಿಗೆ ಕೆಲವು ಕ್ಷೇತ್ರಗಳಲ್ಲಾದರೂ ಸಮಾನ ಸ್ಥಾನಮಾನಗಳು ದೊರೆತವು. ಸಾಮಾಜಿಕ, ಧಾರ್ಮಿಕವಾಗಿ ಕೀಳೆಂದು ಭಾವಿಸಿದ ಮಹಿಳೆಯರನ್ನು ಶರಣರು ಗೌರವದಿಂದ ಕಂಡಿದ್ದರ ಫಲವಾಗಿ ಹನ್ನೆರಡನೆಯ ಶತಮಾನದಲ್ಲಿ ಶಿವಶರಣೆಯರು ವಚನ ಸಾಹಿತ್ಯ ರಚನೆಗೆ ತೊಡಗಿದ್ದರು.

ಹನ್ನೆರಡನೆಯ ಶತಮಾನದ ಮುವತ್ತೈದು ಶಿವಶರಣೆಯರಲ್ಲಿ ಅಕ್ಕಮ್ಮ ಒಬ್ಬಳು. **'ಆಚಾರವೆ ಪ್ರಾಣವಾದ ರಾಮೇಶ್ವರಲಿಂಗ'** ಎಂಬ ವಚನಾಂಕಿತವಿಟ್ಟು ಕೊಂಡು ವಚನಗಳನ್ನು ಬರೆದಿದ್ದಾಳೆ. ಅಕ್ಕಮಹಾ ದೇವಿಯ ನಂತರ ಹೆಚ್ಚಿನ ಸಂಖ್ಯೆಯ ವಚನಗಳು ಬರೆದಿರುವ ಅಕ್ಕಮ್ಮಳ ಒಟ್ಟು 154 ವಚನಗಳು ದೊರೆತಿರುವುದು ಕಂಡುಬರುತ್ತದೆ. ಅವಳ ಜೀವನ ವೃತ್ತಾಂತದ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಶೀಲ-ವ್ರತ-ನೇಮ-ಆಚಾರ ಇವು ಈಕೆಯ ವಚನಗಳ ಮೂಲದ್ರವ್ಯ. ಇವುಗಳನ್ನು ಅಕ್ಕಮ್ಮ ವಿಮರ್ಶಾತ್ಮಕವಾಗಿ ನೋಡುತ್ತಾಳೆ. ಶೀಲ-ವ್ರತ-ನೇಮ-ಆಚಾರ ಇವುಗಳ ಸ್ವರೂಪವು ಅವಳ ವಚನಗಳಲ್ಲಿ ವ್ಯಕ್ತವಾಗುವ ರೀತಿಯು ಈ ಕೆಳಕಂಡಂತೆ ಇದೆ.

ಒಬ್ಬ ಭಕ್ತನಾದವನು ತನ್ನದಲ್ಲದನ್ನು ಮುಟ್ಟಬಾರದನ್ನು ಮುಟ್ಟಿದರೆ, ಕೊಳ್ಳಬಾರದನ್ನು ಕೊಂಡರೆ ಅದೆಲ್ಲವನ್ನು ಬಿಟ್ಟು ನಿಲ್ಲುವುದೆ ವ್ರತ. ಭೌತಿಕ ಶರೀರವು ನಿಂದೆಗೆ ಒಳಗಾಗದಂತೆ ಮಾಡಿಕೊಂಡ ನಿಯಮಕ್ಕೆ ಕೇಡು ಬಂದಲ್ಲಿ ಅದರಿಂದ ಹಿಂದೆ ಸರಿವುದೆ ಆಚಾರ. ಅದನ್ನು ಅರಿತರೂ ಮರೆತು ಹೋದಲ್ಲಿ ತಾನೆ ಅದಕ್ಕೆ ಪರಿಹಾರ ಕಂಡುಕೊಳ್ಳಬೇಕು. ನೋಡಲು ಭಕ್ತನಾಗಿ ಆತ್ಮಕ್ಕೆ ಅನುಸರಿಸಿ ನಡೆಯದಿದ್ದಲ್ಲಿ ಅದು ದೇವರಿಗೆ ಒಪ್ಪದ ನೇಮವಾಗುತ್ತದೆಂದು ಅಕ್ಕಮ್ಮ ವ್ರತ, ನೇಮ ಹಾಗೂ ಆಚಾರದ ಕುರಿತು ಈ ವಚನದಲ್ಲಿ ಹೇಳಿದ್ದಾಳೆ.

*"...ತನ್ನಯ ಸ್ವಪ್ನದಲ್ಲಿ ತನಗಲ್ಲದುದ ಕಂಡಡೆ*
*ತಾ ಮುಟ್ಟದುದ ಮುಟ್ಟಿದಡೆ, ತಾ ಕೊಳ್ಳದುದ ಕೊಂಡಡೆ,*
*ಆ ಸೂಕ್ಷ್ಮತನುವಿನಲ್ಲಿ ಆ ತನುವಂ ಬಿಟ್ಟು ನಿಂದುದೇ ವ್ರತ.*
*ಸ್ಥೂಲತನುವಿನಲ್ಲಿಸರ್ವರ ನಿಂದೆಗೊಡಲಾಗದೆ,*
*ಮಾಡಿಕೊಂಡ ನೇಮಕ್ಕೆ ಕೇಡುಬಂದಲ್ಲಿ*
*ಆ ಅಂಗಕ್ಕೆ ಓಸರಿಸದೆ ನಿಂದುದೆ ಆಚಾರ........."–2*

ಡಾಂಭಿಕ ಭಕ್ತರನ್ನು, ವ್ರತಭ್ರಷ್ಟರು, ಆಚಾರಹೀನರು ಮತ್ತು ವೇಷಧಾರಿಗಳನ್ನು ಕಂಡು ಅಕ್ಕಮ್ಮ ಕಟುವಾಗಿ ಟೀಕಿಸುತ್ತಾಳೆ. ಮೇಲು-ಕೀಳು, ಕನಿಷ್ಠ-ಗರಿಷ್ಠವೆಂಬ ಭೇದ ಭಾವವಿಲ್ಲದೇ ಎಲ್ಲರೂ ಸರಿಸಮಾನರು ಹಾಗೂ ಎಲ್ಲರಿಗೂ ಅರಿವೇ ಮುಖ್ಯ ಎನ್ನುವುದನ್ನು ಈ ವಚನದಲ್ಲಿ ತಿಳಿಸಲಾಗಿದೆ.

*ಬತ್ತಲೆಯಿದ್ದವರೆಲ್ಲ ಕತ್ತೆಯ ಮಕ್ಕಳು*
*ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು*
*ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ.*
*ಅವ ಪ್ರಕಾರವಾದಡೇನು? ಅರಿವೆ ಮುಖ್ಯವಯ್ಯಾ....."–92*

ಭಕ್ತನಾದವನ ವ್ಯಕ್ತಿತ್ವ ಹೇಗಿರಬೇಕೆಂಬುದರ ಚಿತ್ರಣವನ್ನು ಕೊಡುತ್ತಲೇ ದಾಸಿ, ವೇಶಿಯ ಮಕ್ಕಳಲ್ಲಿ ನಿಜಭಕ್ತಿಯ ಕಂಡುಬರಲಾರದು ಎಂಬುವುದನ್ನು ಈ ಕೆಳಗಿನ ವಚನದಲ್ಲಿ ಕಾಣುತ್ತೇವೆ.

*"ವೇಷವಲ್ಲಿರದು?*
*ಸೂಳೆಯಲ್ಲಿ, ಡೊಂಬರಲ್ಲಿ, ಬೈರೂಪನಲ್ಲಿರದೆ?*
*ವೇಷವ ತೋರಿ ಒಡಲಹೊರೆವ*
*ದಾಸಿವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೂ..."–123*

ವ್ರತಚಾರಗಳಿಗೆ ವಿಶೇಷ ಗಮನಕೊಟ್ಟ ಅಕ್ಕಮ್ಮ ಅವುಗಳ ಜೊತೆಗೆ ಸತ್ಯಶುದ್ಧ ಕಾಯಕವನ್ನು ನಿಷ್ಠೆಯಿಂದ ಮಾಡಬೇಕೆನ್ನುತ್ತಾಳೆ.

*"ತಾ ಮಾಡುವ ಕೃಷಿಯ ಮಾಡುವನ್ನ ಬರ ಮಾಡಿ,*
*ಕೃಷಿ ತೀರಿದ ಮತ್ತೆ ಗುರುದರ್ಶನ ಲಿಂಗಪೂಜೆ ಜಂಗಮಸೇವೆ*
*ಶಿವಭಕ್ತರ ಸುಖಸಂಭಾಷಣೆ ಶರಣರ ಸಂಗ*
*ಈ ನೇಮನರಿಯುತಿಪ್ಪುದು ಸದ್ಭಕ್ತನ ಸದಾತ್ಮನ ಯುಕ್ತಿ..."–63*

ಇಲ್ಲಿ ಶರಣರ ಕಾಯಕತತ್ತ್ವ, ಕಾಯಕದ ಅನಂತರ ಮಹತ್ವ ಸ್ಥಾನ ನೀಡಿದ್ದು ಗುರು-ಲಿಂಗ-ಜಂಗಮಕ್ಕೆ.

* ಪ್ರಾಧ್ಯಾಪಕರು, ಕನ್ನಡ ವಿಭಾಗ, ಬೆಂಗಳೂರು ವಿಶ್ವವಿದ್ಯಾನಿಲಯ





ಸದ್ಭಕ್ತನಾದವನು ಇದನ್ನು ಅರಿತುಕೊಂಡು ನಡೆಯುತ್ತಿರುವುದನ್ನು ಅಕ್ಕಮ್ಮ ಈ ವಚನದಲ್ಲಿ ಚಿತ್ರಿಸಿದ್ದಾಳೆ.

*"ಅನ್ಯದೈವ ಭವಿನಾಸ್ತಿಯಾದಲ್ಲಿ,*
*ಪಾದತೀರ್ಥ ಪ್ರಸಾದವಿಲ್ಲದೆ ಬಾಯಿದೆರದಲ್ಲಿ,*
*ಲಿಂಗಕ್ಕೆ ಕೊಡದೆ ಕೊಂಡಲ್ಲಿ...."–6*

ತೋರಿಕೆಯ ವ್ರತಧಾರಿಗಳನ್ನು, ಭರಿತಾರ್ಪಣಗಳನ್ನು, ಕಟ್ಟಳೆಗೊಳಗಾದ ಯಾಂತ್ರಿಕ ಶೀಲವ್ರತ ನೇಮಧಾರಿಗಳನ್ನು, ವಾಮಮಾರ್ಗದಿಂದ ಗಳಿಸಿ ತಂದು ಗುರುಲಿಂಗಜಂಗಮಕ್ಕೆ ಮಾಡುವೆನೆಂಬ ಅನಾಚಾರಿಗಳನ್ನು ವಿಡಂಬಿಸುತ್ತಾಳೆ. ಶರಣನಾದವನು ಸಂಸಾರ ಬಂಧನಕ್ಕೆ ಒಳಗಾಗಿ, ಅನ್ಯದೇವರು, ಪರಲೋಕ, ಆಗಮಗಳಲ್ಲಿ ನಂಬಿಕೆಯಿಟ್ಟು ತೀರ್ಥ, ಪ್ರಸಾದವಲ್ಲದಕ್ಕೆ ಆಸೆಪಟ್ಟು ಲಿಂಗಕ್ಕೆ ಅರ್ಪಿಸದೆ ತಾನೇ ಅದನ್ನು ಅನುಭವಿಸಿದರೆ ಪರಮಾತ್ಮ ಒಲಿಯಲಾರನು ಎಂದು ಅಕ್ಕಮ್ಮ ಹೇಳುವದಲ್ಲದೇ ಭಕ್ತನ ವ್ಯಕ್ತಿತ್ವದ ಸೂಕ್ಷ್ಮ ಪರಿಚಯವನ್ನು ಈ ವಚನದಲ್ಲಿ ಮಾಡಿಕೊಟ್ಟಿದ್ದಾಳೆ.

*"ಆಚಾರ ತಪ್ಪಿದಲ್ಲಿ ಪ್ರಾಯಶ್ಚಿತ್ತ ಉಂಟೆಂಬ*
*ಅನಾಚಾರಿಗಳ ಮುಖವ ನೋಡಬಹುದೆ?*
*ಆಚಾರವಟ್ಟದ ಹೊನ್ನೆ? ಮೊತ್ತದ ಮಡಕೆಯೆ? ಸಂತೆಯ ಬೆವಹಾರವೆ?*
*ಜೂಜಿನ ಮಾತೆ? ವೇಶ್ಯೆಯ ಸತ್ಯವೆ? ಪೂಸರ ವಾಚವೆ?*
*ಇಂತೀ ವ್ರತದ ನಿಹಿತವ ತಿಳಿದಲ್ಲಿ,*
*ಇಷ್ಟಬಾಹ್ಯನ ವ್ರತಭ್ರಷ್ಟನ ಸರ್ವಪ್ರಮಥರಲ್ಲಿ ಅಲ್ಲಾ ಎಂದವನ......"–13*

ನಡೆನುಡಿಯಲ್ಲಿ ಆಚಾರ ತಪ್ಪಿ ಪಶ್ಚಾತ್ತಾಪಗೊಂಡು ಅದೆಲ್ಲವು ಇಲ್ಲವಾಗುತ್ತದೆಂಬ ಅನಾಚಾರಿಗಳ ಮುಖವನ್ನು ನೋಡಲಾಗದು. ಪುನ್ನಾಗ, ನಿಧಿಯ ಮಡಕೆ, ಸಂತೆಯ ವ್ಯವಹಾರ, ಜೂಜಿನ ಮಾತು, ವೇಶ್ಯೆಯ ಸತ್ಯ, ಸುಳ್ಳಾಡುವವನ ಮಾತು ಇಂತಹ ವ್ರತದ ಯೋಗ್ಯತೆ ತಿಳಿದಿದ್ದರೂ ಶರಣರ ತತ್ವಗಳಿಗೆ ಬಾಹ್ಯವಾಗಿ ನಡೆದುಕೊಳ್ಳುವವನ ಜೊತೆಗೆ ಅರಿತೊ ಅರಿಯದೆಯೋ ಕೂಡಿ, ಅನಂತರ ಅರಿತರೂ ಅದನ್ನು ಬಿಡದಿದ್ದರೆ ಭಕ್ತನಿಗೆ ಅದು ಸಲ್ಲಲಾರದು. ಒಂದು ವೇಳೆ ಪರಮಾತ್ಮನನ್ನು ಬಿಟ್ಟರೆ ಅದನ್ನು ತಪ್ಪೆಂದು ತಿಳಿದರೆ ಮತ್ತೆ ಕೂಡಿಕೊಳ್ಳಲಾರ ಎಂದು ಹೇಳಲಾಗಿದೆ.

***"ಆಚಾರ ತಪ್ಪಿದಲ್ಲಿ, ಶ್ರೇಷ್ಠನು ನಾನೆಂದು***
***ಆಚಾರವನು ಅನುಸರಣೆ ಮಾಡಬಹುದೆ?***
***ಆಚಾರಕ್ಕೂ ಪಕ್ಷಪಾತ ಉಂಟೆ?***
***ಕಿತ್ತ ಕಣ್ಣೆ ಗಂಟನಿಕ್ಕಿದ ಮತ್ತೆ ಅಳತಕ್ಕುಂಟೆ?***
***ಸತ್ಯ ತಪ್ಪಿ ನಡೆದ ಮತ್ತೆ ಭಕ್ತಿಯುಂಟೆ?....."–14***

ಆಚಾರ ತಪ್ಪಿದರೂ ತಾನೇ ಶ್ರೇಷ್ಠವೆಂದು ಅನಂತರದಲ್ಲಿ ಅದನ್ನು ಅನುಸರಣೆ ಮಾಡಲಾಗದು. ಆಚಾರ ಅನುಸರಣೆಯಲ್ಲಿ ಭೇದಭಾವವಿಲ್ಲ. ತುಂಡಾದ ಹಗ್ಗವನ್ನು ಜೋಡಿಸಿದರೆ ಅದು ಮೊದಲ ಸ್ಥಿತಿಗೆ ಬರಲಾರದು. ಅಸತ್ಯದ ಮಾರ್ಗದಲ್ಲಿ ನಡೆದರೆ ಭಕ್ತಿಯಿರಲಾರದು. ನಡತೆಗೆಟ್ಟವಳನ್ನು ಕಣ್ಣಾರೆ ಕಂಡೂ ಮತ್ತೆ ಸತ್ಯದ ಪರೀಕ್ಷೆಗೆ ಗುರಿಪಡಿಸಬೇಕಾಗಿಲ್ಲ. ಅದು ಎಲ್ಲರಿಗೂ ತಿಳಿದ ವಿಷಯವಾಗಿದ್ದರಿಂದ ಅದರ ಅವಶ್ಯಕತೆಯಿಲ್ಲ ಎಂದು ಅಕ್ಕಮ್ಮ ಆಚಾರಕ್ಕೆ ಹೆಚ್ಚಿನ ಮಹತ್ವ ನೀಡಬೇಕೆಂದು ಈ ವಚನದಲ್ಲಿ ನಿರೂಪಿಸಿದ್ದಾಳೆ.

***"ಆವಾವ ವ್ರತಕ್ಕೂ ಗುರು ಲಿಂಗ ಜಂಗಮನೆ ಮೂಲಮಂತ್ರ***
***ಆವಾವುದ ತಾ ಕೊಂಬ ಕೊಡುವಲ್ಲಿ***
***ಲಿಂಗ ಜಂಗಮನ ಮುಂದಿಟ್ಟುಕೊಂಬುದೆ ಶುದ್ಧಕ್ರೀ......." –18***

ಯಾವ ವ್ರತಾಚಾರಕ್ಕೂ ಮೂಲ ಮಂತ್ರ ಗುರು-ಲಿಂಗ-ಜಂಗಮ. ಯಾವುದಾದರೂ ತಾನು ಕೊಂಡುಕೊಳ್ಳುವಲ್ಲಿ ಗುರು-ಲಿಂಗ-ಜಂಗಮ ಮುಂದಿಟ್ಟುಕೊಂಡು ಮಾಡುವ ಕ್ರಿಯೆಯೇ ಶ್ರೇಷ್ಠವೆಂದು ಪರಿಗಣಿಸಲಾಗುತ್ತದೆ. ಒಂದು ವೇಳೆ ಇದನ್ನು ಆಚರಿಸದಿದ್ದರೇ ಅವುಗಳ ಹೊರತುಪಡಿಸಿ ಮತ್ತೊಂದು ತೆಗೆದುಕೊಂಡರೆ ಅದು ತನಗೆ ಸಂಬಂಧಿಸಲಾರದ ದ್ರವ್ಯ ಅದೇ ತನ್ನ ಭಾಷೆಯು ಕೂಡ ಎಂದು ಹೇಳಿದ್ದಾಳೆ.

*"ಆಚೆಯ ನೀರಲ್ಲಿ ಈಚೆಯ ತೆಗೆವುದು ಚೆಲುಮೆಯಲ್ಲ;*
*ಆಚೆಯಲ್ಲಿ ಕೇಳಿದ ಮಾತ ಈಚೆಯಲ್ಲಿ ನುಡಿದು*
*ಮತ್ತಾಚೆಯಲ್ಲಿ ಬೆರೆಸುವನ ಭಕ್ತನಲ್ಲ;*
*ಆತನ ಇದಿರಿನಲ್ಲಿ ಆತನ ಸತಿಯ ಅವ್ವಾ ಎಂದು,*
*ಆತ ಸಂದಲ್ಲಿ ಸತಿ ಎಂಬ ಭಂಡರಿಗೇಕೆ ವ್ರತನೇಮ ನಿತ್ಯ?..."–15*

ಡಾಂಭಿಕ ಭಕ್ತರನ್ನು, ಅನೈತಿಕ ಬಾಳು ಮಾಡುವ ಭಂಡರನ್ನು ಕುರಿತಾಗಿದೆ. ವೇಷಧಾರಿಯಾದವರೆಲ್ಲ ಭಕ್ತರಲ್ಲ. ಯಾರೋ ಆಡಿದ ಮಾತನ್ನು ಇನ್ನಾರಿಗೂ ಇನ್ನಷ್ಟನ್ನು ಸೇರಿಸಿ ಹೇಳುವವನು ಭಕ್ತನಲ್ಲ. ಅದು ಭಕ್ತನ ಲಕ್ಷಣವೂ ಅಲ್ಲ. ಭಕ್ತನಂತೆ ನಟಿಸುತ್ತ ಅನ್ಯಸ್ತ್ರೀಯರನ್ನು ಕಂಡು ಆಸೆಪಡುವವರು ಭಂಡರೇ ಹೊರತು ಭಕ್ತರಲ್ಲ. ಭಕ್ತರಿಗೆ ನೀತಿ ಮುಖ್ಯ, ಪರಸತಿಯ ವ್ಯಾಮೋಹ ಸಲ್ಲದು. ಅಕ್ಕಮ್ಮ ಈ ವಚನದಲ್ಲಿ ಪರನಾರಿ ಸಹೋದರತ್ವವು ಭಕ್ತನಲ್ಲಿ ಇರಬೇಕಾದ ಗುಣ. ಈ ನೈತಿಕ ಗುಣವಿಲ್ಲದವರನ್ನು ಭಂಡರೆಂದು ಕರೆಯುತ್ತಾಳೆ.

*"ಕಂಗಳ ಮುಂದೆ ಕಂಡಂತೆ ಕಾಣಬಹುದೆ?*
*ಮನ ನೆನೆದಂತೆ ಆಡಬಹುದೆ?*
*ಕಂಡಕಂಡವರಲ್ಲಿ ಸಂಗವ ಮಾಡಬಹುದೆ?*
*ಅದು ಸ್ವಾನುಭಾವರಿಗೆ ಸಲ್ಲದ ಮತ......"–32*

ದೃಷ್ಟಿಯ ನೇರಕ್ಕೆ ಕಂಡಂತೆ ಕಾಣುವುದಿಲ್ಲ. ಒಬ್ಬ ವ್ಯಕ್ತಿ ತನ್ನ ಮನ ಬಂದಂತೆ ಮಾತಾಡಬಹುದೆ? ಬಯಸಿದವರೊಂದಿಗೆ ಸಂಗವ ಮಾಡಬಹುದೆ? ಅದು ತನ್ನನ್ನು ತಾನು ಅರಿತವರಿಗೆ ಸಲ್ಲದ ದೂರದ ಮಾತು. ಮೇಲಿನ ಅಂಶಗಳಲ್ಲಿ ಒಂದನ್ನು ಅರಿಯದವರಲ್ಲಿ ಶರೀರವ ಕರಗಿ ಮನವ ಕೂಡಿ ತ್ರಿವಿಧ ಪ್ರಸಾದದಲ್ಲಿ ಮಹಾಪ್ರಸಾದಿಯಾಗಿ ವ್ರತಾಂಗಕ್ಕೆ ಭಂಗವಾಗಿದ್ದ ಅತಿವಿರಳ ಸದ್ಭಕ್ತನ ಅಂಗವೇ









ರಾಮೇಶ್ವರಲಿಂಗದ ಸುಖ ಎನ್ನುವ ಮಾತು ಇಲ್ಲಿ ಮಹತ್ವದಾಗಿದೆ.

*"ಖಂಡಿತ ಕಾಯಕದ ವ್ರತಾಂಗಿಯ ಮಾಟದ ಇರವೆಂತೆಂದಡೆ:*
*ಕೃತ್ಯದ ನೇಮದ ಸುಯಿದಾನದ ಅಚ್ಚೊತ್ತಿದಂತೆ ತಂದು*
*ಒಡೆಯರ ಭಕ್ತರ ತನ್ನ ಮಡದಿ ಮಕ್ಕಳು ಸಹಿತಾಗಿ ಒಡಗೂಡಿ,*
*ಎಡೆಮಾಡಿ ಗಡಿಗೆ ಭಾಜನದಲ್ಲಿ ಮತ್ತೊಂದೆಡೆಗೆ, ಈಡಿಲ್ಲದಂತೆ,*
*ಬಿಡುಮುಡಿಯನರಿಯದೆ,......"–40*

ಕಟ್ಟುನಿಟ್ಟಿನಿಂದ ಕಾಯಕವನ್ನು ಪಾಲಿಸಿಕೊಂಡವರ ಕ್ರಿಯೆ ಹೇಗಿರುತ್ತದೆಂದರೆ; ಕಾಯಕ ನಿಯಮದ ಸಮಾಧಾನದ ಮುದ್ರೆಯೊತ್ತಿದಂತೆ ಸರ್ವರೂ ಕೂಡಿಕೊಂಡು ಎಡೆಮಾಡಿ ಪಾತ್ರೆಯಲ್ಲಿ ಮತ್ತೊಂದಡೆಯಲ್ಲಿ ಗುರಿಯಿಲ್ಲದೆ, ಬಿಚ್ಚಿದ ತಲೆಗೂದಲನ್ನರಿಯದೆ, ರಾತ್ರಿಯೂಟಕ್ಕೆಂದು ಹುಡುಕಾಡದೆ ಹಗಲಿನ ಊಟವನ್ನು ನೆನೆಯದೆ, ಇಂದಿಗೆ ನಾಳೆಗೆ ಎಂಬ ಸಂಶಯವ ಬಿಟ್ಟು ಮತ್ತೆ ಕೂಡಿಕೊಂಡು ಲಿಂಗಾರ್ಚನೆಯ ಮಾಡಿ ಸದಾ ಆನಂದದಿಂದಿರುವ ಭಕ್ತನ ಮನೆಯ ಅಂಗಳವೆ ಕೈಲಾಸ, ರಾಮೇಶ್ವರಲಿಂಗವೆ ಅರಿವು ಎನ್ನಲಾಗಿದೆ.

***"ಖ್ಯಾತಿಯ ಲಾಭಕ್ಕೆ ವ್ರತವ ಮಾಡಿಕೊಂಡವನ ನೇಮವ ನೋಡಾ!***
***ಊರಿಗೆ ಬಲುಗಯ್ಯ ಬಂದುಣ್ಣಬೇಕೆಂದು ದಾರಿದಾರಿಯ ಕಾಯ್ದು***
***ಮತ್ತಾರನು ಏನೆಂದರಿಯದೆ.***
***ಮತ್ತಾರು ಆರೈಕೆಗೊಂಡಡೆ ದೇವರೆಂದು,***
***ಬಂದವರ ದಾರಿಗರೆಂದು ಕಾಣುತ್ತ***
***ಇಂತೀ ಗಾರಾದ ಮನಕ್ಕೆ ಇನ್ನಾರು ಹೇಳುವರಯ್ಯಾ?...."–45***

ತಾನು ಪ್ರಸಿದ್ಧನಾಗಬೇಕು ಎನ್ನುವ ಉದ್ದೇಶದಿಂದ ವ್ರತವನ್ನು ಆಚರಿಸುವವನ ವ್ರತ ವ್ರತವಲ್ಲ ಎಂಬ ಭಾವನೆಯನ್ನು ಈ ವಚನದಲ್ಲಿ ಅಭಿವ್ಯಕ್ತಿಗೊಳಿಸಲಾಗಿದೆ. ತೋರಿಕೆಯ ಭಕ್ತಿ ಭಕ್ತಿಯಲ್ಲ. ವ್ರತ, ಭಕ್ತಿಯೆಂಬುದು ಅನ್ಯರಿಗೆ ತೋರಿಸುವುದಕ್ಕಾಗಿ ಮಾಡುವುದಲ್ಲ. ತನ್ನ ಆತ್ಮ ಸಂತೃಪ್ತಿಗಾಗಿ ಮಾಡಬೇಕೆಂದು ಅಕ್ಕಮ್ಮ ಹೇಳಿದ್ದಾಳೆ.

***"ಚಿನ್ನ ಒಡೆದಡೆ ಕರಗಿದಡೆ ರೂಪಪ್ಪುದಲ್ಲದೆ,***
***ಮುತ್ತು ಒಡೆದು ಕರಗಿದಡೆ ರೂಪಪ್ಪುದೆ?***
***ಮರ್ತ್ಯದ ಮನುಜ ತಪ್ಪಿದರೊಪ್ಪಬೇಕಲ್ಲದೆ,***
***ಸದ್ಭಕ್ತ ಸದ್ಭೈವ ತಪ್ಪಿದಡೆ ಒಪ್ಪಬಹುದೆ?***
***ಆಚಾರಕ್ಕು ಅಪಮಾನಕ್ಕು ಅಂಗವೆ ಕಡೆಯಿಲ್ಲದೆ,...."–51***

ಚಿನ್ನ ಕರಗಿ ಮತ್ತೆ ತನ್ನ ಮೂಲ ಸ್ವರೂಪ ಪಡೆಯಬಹುದು, ಆದರೆ ಮುತ್ತು ಒಡೆದರೆ ಮೂಲ ಸ್ವರೂಪ ಮತ್ತೆ ಪಡೆಯಲಾರದು. ಭವಿ ಅಥವಾ ಸಾಮಾನ್ಯ ಜನರು ತಿಳಿದೋ ತಿಳಿಯದೋ ತಪ್ಪು ಮಾಡಿದರೆ ಒಪ್ಪಬಹುದಲ್ಲದೆ, ಭಕ್ತನಾದವನು ತಪ್ಪು ಮಾಡಿದರೆ ಒಪ್ಪಿಕೊಳ್ಳಬಾರದು. ಸದಾಚಾರಕ್ಕೂ ಅವಮಾನಕ್ಕೂ ಅಂಗವೇ ಕಾರಣವಾದ್ದರಿಂದ ಬೇರೊಂದು ಅಂಗದ ಮೂಲಕ ತಾನು ಶುದ್ಧವೆಂದು ತೋರಿಸಿ ಗುರು-ಲಿಂಗ-ಜಂಗಮದಲ್ಲಿ ಒಂದಾಗಲು ಸಾಧ್ಯವಿಲ್ಲ. ಲಿಂಗದಿಂದ ದೂರವಿದ್ದು ಆಚಾರವು ಅಳವಡಿಸಿಕೊಳ್ಳದೆ ಜಂಗಮರ ಕೊಂದವನನ್ನು ಕಂಡು ತನ್ನ ಮನಬಂದಂತೆ ನುಡಿವವನು ಪಾತಾಳಕ್ಕೆ ಹೋಗುವುದರಲ್ಲಿ ಸಂದೇಹವಿಲ್ಲ.

*"ತನುವಿಂಗೆ ಕ್ರೀ, ಆತ್ಮಂಗೆ ವ್ರತ.*
*ಆ ವ್ರತಕ್ಕೆ ನಿಶ್ಚಯ ಕರಿಗೊಂಡು*
*ಬಾಹ್ಯದ ಕ್ರೀ, ಅರಿವಿನ ಆಚರಣೆ,*
*ಭಾಷೆ ಓಸರಿಸದೆ ನಿಂದಾತನೆ....."–59*

ಶರೀರಕ್ಕೆ ಕ್ರಿಯೆ, ಆತ್ಮನಿಗೆ ವ್ರತ ಈ ವ್ರತಕ್ಕೆ ಖಚಿತವಾಗಿ ಲಯಗೊಂಡು ಬಾಹ್ಯದ ಕ್ರಿಯೆ, ಅರಿವಿನ ಆಚಾರಣೆ, ಭಾಷೆಯಿಂದ ಹಿಂದೆ ಸರಿಯದಾತನೆ ರಾಮೇಶ್ವರಲಿಂಗವೆಂದು ಪರಿಗಣಿಸಲಾಗುತ್ತದೆ ಎನ್ನುತ್ತಾಳೆ.

*"ನಾನಾ ವ್ರತಂಗಳ ಪಿಡಿವುದೆಲ್ಲವು ಮನದ ಶಂಕೆ*
*ಮನ ಹರಿದಾಡುವುದೆಲ್ಲವು ತನುವಿನ ಶಂಕೆ*
*ಮನ ತನು ಕೂಡಿ ನಡೆವುದೆಲ್ಲವು ಪ್ರಕೃತಿಯ ಶಂಕೆ*
*ಮನ ತನು ಪ್ರಕೃತಿ ಮೂರೊಂದಾದಲ್ಲಿ ಶೀಲವೆಂಬ ಪಾಶ..."–77*

ನಾನಾ ರೀತಿಯ ವ್ರತಗಳನ್ನು ಆಚರಿಸುವುದು ಮನದ ಹಿಂಜರಿಕೆ. ಮನ ಕಂಡಕಂಡ ಕಡೆ ಹರಿದಾಡುವುದು ಮನದ ಸಂದೇಹ, ತನುಮನ ಕೂಡಿ ನಡೆಯುವುದೆಲ್ಲವು ನಿಸರ್ಗದ ನಂಬಿಕೆ. ಮನ ತನು ಪ್ರಕೃತಿ ಈ ಮೂರು ಒಂದಾದಲ್ಲಿ ಶೀಲವೆಂಬ ಬಂಧನವು ಜೀವನವೆ ಸುತ್ತಿತ್ತು. ಬಹಿರಂಗ ಹಾಗೂ ಅಂತರಂಗ ಎರಡೂ ನಿಯಂತ್ರಣ ತಪ್ಪಿದಲ್ಲಿ ರಾಮೇಶ್ವರಲಿಂಗವೆಂಬುದರ ಅರಿವಾಯಿತು ಎನ್ನಲಾಗಿದೆ.

***"ಮಾಡಿ ನೀಡುವ ಭಕ್ತನನರಸಿಕೊಂಡು ಹೋಗಿ***
***ಗಡ್ಡ ಮಂಡೆ ಬೋಳಿನ ಕುರುಹು ತೋರಿ,***
***ಬಲ್ಲವರಂತೆ ಆಧ್ಯಾತ್ಮವ ನುಡಿದು***
***ಉಪಾಧಿಯಿಂದ ಒಡಲ ಹೊರೆವಾತ ವಿರಕ್ತನೆ? ಅಲ್ಲ......."–111***

ಭಕ್ತನಾದವನ ಆಚಾರವನ್ನು ಈ ವಚನದಲ್ಲಿ ಚಿತ್ರಿಸಿದ್ದಾಳೆ. ಪ್ರಸಾದವನ್ನು ಕೊಡುವ ಭಕ್ತರನ್ನು ಹುಡುಕಿಕೊಂಡು ಹೋಗಿ ಅವರ ಮನೆಯಲ್ಲಿ ಪ್ರಸಾದವನ್ನು ಸ್ವೀಕರಿಸಲು ಶಿವಶರಣನ ಲಕ್ಷಣಗಳನ್ನು ತೋರಿಸಿ, ಎಲ್ಲವನ್ನು ಅರಿತವನಂತೆ ಆಧ್ಯಾತ್ಮದ ಕುರಿತು ನುಡಿಗಳನ್ನು ನುಡಿದು ತೋರಿಕೆಯ ವೇಷದಿಂದ ಒಡಲನ್ನು ಹೊರೆವವನು ವಿರಕ್ತನಲ್ಲ. ಅವನ ರೀತಿಯೆಂದರೆ ಆಚಾರ ಸಹಿತವಾಗಿ ಭಕ್ತಿಯಿಂದ ಭಿಕ್ಷೆ ತೆಗೆದುಕೊಂಡು ವೇಷವಿಲ್ಲದವನನ್ನು ತೋರಿಸಿ ಭಕ್ತನನ್ನು ಬದುಕಿಸಬೇಕೆಂದು ಕೇಳಿಕೊಳ್ಳುತ್ತಾಳೆ.

ಒಟ್ಟಿನಲ್ಲಿ ಅಕ್ಕಮ್ಮನ ವಚನಗಳಲ್ಲಿ ಹೆಚ್ಚಿನ ವಚನಗಳೆಲ್ಲ ಭಕ್ತ ಹಾಗೂ ಆತನ ವ್ರತ, ಆಚರಣೆ, ನೇಮ, ಶೀಲಗಳ ಕುರಿತಾಗಿರುವುದು ಕಂಡುಬರುತ್ತವೆ. ಭಕ್ತ ಹಾಗೂ ಭಕ್ತಿಗೆ ನಿಕಟವಾದ ಸಂಬಂಧವಿದೆ. ಹಾಗಾಗಿ ಭಕ್ತಿ ಎನ್ನುವಂಥದು ವ್ಯಕ್ತಿಯ ಅಂತರಂಗ ಹಾಗೂ ಬಹಿರಂಗ ಎರಡರ ಸಮಗ್ರ ಬೆಳವಣಿಗೆಗೆ ಕಾರಣವಾಗುತ್ತದೆ. ಸಹಕಾರದ ಜೀವನ, ಸತ್ಯಶುದ್ಧ ಕಾಯಕ, ಅಂತರಂಗ ಬಹಿರಂಗದ ಶುದ್ಧತೆ ಮೊದಲಾದ ವಿಷಯಗಳ ಪ್ರಸ್ತಾಪವನ್ನು ಅವಳ ವಚನಗಳಲ್ಲಿ ಕಾಣಬಹುದು. ಭಕ್ತನಾದವನ ವ್ಯಕ್ತಿತ್ವದ ಚಿತ್ರಣವು ಸ್ಪಷ್ಟವಾಗಿ ನೀಡಲಾಗಿದೆ.

❑

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೫೭೮. | ಶ್ರೀ ಎನ್.ಕೆ. ಗಂಗಾಧರಯ್ಯ<br>ಬೆಂಗಳೂರು | ೧,೦೦೫.೦೦ |
| ೧೫೭೯. | ಶ್ರೀ ಚನ್ನಬಸವಯ್ಯ<br>ಬೆಂಗಳೂರು | ೧,೦೦೧.೦೦ |
| ೧೫೮೦. | ಶ್ರೀ ಹೆಚ್.ಬಿ. ಅಶೋಕ<br>ದೊಣೆಗಾಲ್ | ೫೦೦.೦೦ |
| ೧೫೮೧. | ಶ್ರೀ ಎಲ್.ಎಸ್. ಗಂಗಣ್ಣ<br>ಹುದ್ದೇಹೊಸಕೆರೆ | ೫೦೦.೦೦ |
| ೧೫೮೨. | ಶ್ರೀ ಆರ್. ರೇವಣಸಿದ್ಧಯ್ಯ<br>ಬೆಂಗಳೂರು | ೧೦,೦೦೦.೦೦ |
| ೧೫೮೩. | ಶ್ರೀ ಕೆ.ಹೆಚ್. ಗಂಗಯ್ಯ<br>ಕುಣಿಗಲ್ | ೧,೦೫೫.೦೦ |
| ೧೫೮೪. | ಶ್ರೀಮತಿ ಎಸ್. ದ್ರಾಕ್ಷಾಯಿಣಿ<br>ತುಮಕೂರು | ೨,೦೦೦.೦೦ |
| ೧೫೮೫. | ಶ್ರೀ ಸಿ. ಜಯಣ್ಣ<br>ತುಮಕೂರು | ೧,೦೦೦.೦೦ |
| ೧೫೮೬. | ಶ್ರೀ ಎಂ. ಚಂದ್ರಶೇಖರಯ್ಯ<br>ಬಸವಾಪಟ್ಟಣ | ೧,೦೦೦.೦೦ |
| ೧೫೮೭. | ಶ್ರೀ ಪರಮೇಶ್ವರಪ್ಪ<br>ಬೆಂಗಳೂರು | ೧,೦೦೦.೦೦ |
| ೧೫೮೮. | ಶ್ರೀ ಬಸವರಾಜು<br>ಬೆಂಗಳೂರು | ೫೦೦.೦೦ |
| ೧೫೮೯. | ಶ್ರೀ ನಂಜುಂಡಪ್ಪ<br>ರಾಮನಗರ | ೫೦೦.೦೦ |
| ೧೫೯೦. | ಶ್ರೀ ಚಂದ್ರಶೇಖರಯ್ಯ<br>ಬೆಂಗಳೂರು | ೧,೦೦೦.೦೦ |
| ೧೫೯೧. | ಶ್ರೀ ಆರ್. ಗೋವಿಂದಪ್ಪ<br>ತುಮಕೂರು | ೧,೦೦೧.೦೦ |
| ೧೫೯೨. | ಶ್ರೀ ಪಿ. ಚನ್ನಪ್ಪ<br>ತುಮಕೂರು | ೧,೦೦೦.೦೦ |
| ೧೫೯೩. | ಶ್ರೀ ಟಿ. ತಿಮ್ಮೇಗೌಡ<br>ದೊಡ್ಡಉಪ್ಪಳ | ೧,೦೦೦.೦೦ |
| ೧೫೯೪. | ಶ್ರೀ ಸಿ. ರೇವಣಸಿದ್ಧಯ್ಯ<br>ಕೋರ | ೧,೦೦೦.೦೦ |
| ೧೫೯೫. | ಶ್ರೀ ಎಸ್. ಚಿದಾನಂದಯ್ಯ<br>ಶ್ರೀ ಸಿದ್ಧಗಂಗಾಮಠ | ೧,೦೦೦.೦೦ |
| ೧೫೯೬. | ಶ್ರೀ ಕೆ.ಆರ್. ಚಂದ್ರಯ್ಯ<br>ಕಾಟೇನಹಳ್ಳಿ | ೧,೦೦೦.೦೦ |
| ೧೫೯೭. | ಶ್ರೀ ವಿ. ಪರಮೇಶ್ವರಯ್ಯ<br>ಶಿವಮೊಗ್ಗ | ೫೦೦.೦೦ |
| ೧೫೯೮. | ಶ್ರೀ ಜಿ.ಬಿ. ಮೃತ್ಯುಂಜಯ<br>ಗೆಟ್ಟೀಪುರ | ೫,೦೦೧.೦೦ |
| ೧೫೯೯. | ಶ್ರೀ ಸೋಮಶೇಖರಯ್ಯ<br>ಬೆಂಗಳೂರು | ೧,೦೦೦.೦೦ |
| ೧೬೦೦. | ಶ್ರೀ ಕೆ.ಹೆಚ್. ನಾರಾಯಣರೆಡ್ಡಿ<br>ತುಮಕೂರು | ೧,೦೦೦.೦೦ |
| ೧೬೦೧. | ಶ್ರೀ ಕೆಂಪಹನುಮಯ್ಯ<br>ಚಿಕ್ಕಕೊರಟಗೆರೆ | ೧,೧೦೫.೦೦ |
| ೧೬೦೨. | ಶ್ರೀ ಟಿ.ಎಸ್. ಬಸವಮೂರ್ತಿ<br>ತಮ್ಮಡಿಹಳ್ಳಿ | ೧,೦೦೧.೦೦ |
| ೧೬೦೩. | ಶ್ರೀ ಕೆ.ಬಿ. ದೇವರಾಜು<br>ಬೆಂಗಳೂರು | ೧೦,೦೦೦.೦೦ |
| ೧೬೦೪. | ಶ್ರೀ ಎಸ್. ಮಂಜುನಾಥ್<br>ತುಮಕೂರು | ೧,೦೦೧.೦೦ |
| ೧೬೦೫. | ಶ್ರೀ ಎಸ್.ಎಸ್. ಚಿಕ್ಕಣ್ಣಪ್ಪ<br>ನೆಲಮಂಗಲ | ೧,೦೦೦.೦೦ |
| ೧೬೦೬. | ಶ್ರೀ ಡಿ.ಸಿ. ಚನ್ನಮಲ್ಲಯ್ಯ<br>ತುಮಕೂರು | ೧೦,೦೦೧.೦೦ |
| ೧೬೦೭. | ಶ್ರೀ ಮರುಳಸಿದ್ಧಯ್ಯ<br>ಬೇವೂರು | ೨,೦೦೦.೦೦ |
| ೧೬೦೮. | ಶ್ರೀ ಬ್ರಹ್ಮಶ್ರೀ ಎಸ್.ಆರ್. ಆರಾಧ್ಯ<br>ಬೆಂಗಳೂರು | ೧,೦೦೦.೦೦ |
| ೧೬೦೯. | ಶ್ರೀ ಆರ್. ಅಶೋಕ<br>ಬೆಂಗಳೂರು | ೫೦೦.೦೦ |
| ೧೬೧೦. | ಶ್ರೀ ಬಿ.ಎಸ್. ಚಂದ್ರಶೇಖರ<br>ಬೆಂಗಳೂರು | ೧,೦೦೦.೦೦ |
| ೧೬೧೧. | ಶ್ರೀ ಕೆ.ಎಸ್. ಶಿವರುದ್ರಯ್ಯ<br>ಬೆಂಗಳೂರು | ೧,೦೦೬.೦೦ |
| ೧೬೧೨. | ಶ್ರೀ ಎಂ. ಗಂಗಾಧರಯ್ಯ<br>ಬೆಂಗಳೂರು | ೨,೦೦೧.೦೦ |
| ೧೬೧೩. | ಶ್ರೀ ಎಂ.ಆರ್. ವಿರೂಪಾಕ್ಷಯ್ಯ<br>ಅರಸೀಕೆರೆ | ೧,೦೦೦.೦೦ |

(ಮುಂದುವರೆಯುತ್ತದೆ)



ಲೋಕಸಭಾ ಸದಸ್ಯರಾದ ಶ್ರೀ ಎಂ. ವೀರಪ್ಪ ಮೊಯಿಲಿ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಪಡೆದರು.



ರಾಮನಗರದ ಜಿಲ್ಲಾಧಿಕಾರಿ ಡಾ. ಎಂ.ಆರ್. ಮಮತಾ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರಿಗೆ ೧೧೦ನೇ ಹುಟ್ಟು ಹಬ್ಬದ ಶುಭಾಶಯ ಕೋರಿ ಆಶೀರ್ವಾದ ಪಡೆದರು.



ಗುಂಡ್ಲುಪೇಟೆ ಉಪ ಚುನಾವಣೆಯಲ್ಲಿ ವಿಜೇತರಾದ ಶ್ರೀಮತಿ ಗೀತಾ ಮಹದೇವ ಪ್ರಸಾದ್ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು.



ಚಲನಚಿತ್ರ ರಂಗದ ಖ್ಯಾತ ಹಾಸ್ಯ ನಟರಾದ ಶ್ರೀ ರಂಗಾಯಣ ರಘು ಅವರು ಕುಟುಂಬ ಸಮೇತ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದ ಪಡೆದರು.



ಶ್ರೀಮಠದ ಹಳೆ ವಿದ್ಯಾರ್ಥಿ ಶ್ರೀ ರಾಜಶೇಖರಯ್ಯ ಅವರು ಬರೆದ "Learn the Knows" ಕೃತಿಯನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಲೋಕಾರ್ಪಣೆ ಮಾಡಿದರು.



ನೆಲಮಂಗಲದ ಪವಾಡ ಶ್ರೀ ಬಸವಣ್ಣ ದೇವರ ಮಠದ ನೂತನ ರಥವನ್ನು ಸಿದ್ಧಗಂಗಾ ಮಠದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಪವಾಡ ಶ್ರೀ ಬಸವಣ್ಣ ದೇವರ ಮಠದ ಶ್ರೀಗಳು ಹಾಗೂ ಶ್ರೀ ಕಂಚುಗಲ್ ಬಂಡೇಮಠದ ಶ್ರೀಗಳವರು ಉಪಸ್ಥಿತರಿದ್ದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore-10. Ph : 23384233
email ID : geetanjaligraphics@gmail.com